CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜನವರಿ ೨೦, ೨೦೦೫ (ಪುಷ್ಯ ೩೦, ಶಕ ವರ್ಷ ೧೯೨೬) | ಸಂಚಿಕೆ ೩ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಕಾರ್ಖಾನೆಗಳು ಮತ್ತು ಬಾಯ್ಲರುಗಳ ಇಲಾಖೆ**
**ಕಾರ್ಖಾನೆಗಳ ಉಪ ನಿರ್ದೇಶಕರ ಕಛೇರಿ, ಹುಬ್ಬಳ್ಳಿ ವಿಭಾಗ-1, ಹುಬ್ಬಳ್ಳಿ**
**ಉಮಚಗಿ ಬಿಲ್ಡಿಂಗ್, 2ನೇ ಮಹಡಿ, ಕೋಯಿನ್ ರೋಡ್, ಹುಬ್ಬಳ್ಳಿ-20**
**ಟೆಂಡರ್ ಕಂ ಬಹಿರಂಗ ಹರಾಜು ಮೂಲಕ ಹಳೆಯ ಅನುಪಯುಕ್ತ ವಾಹನವನ್ನು ವಿಲೇವಾರಿ ಮಾಡುವ ಬಗ್ಗೆ**
**ಅಧಿಸೂಚನೆ ಸಂಖ್ಯೆ: ಕಾಉನಿ:ಹುವಿ-1/ಈಎಸ್‌ಟಿ:ಇತರೇ:ಸಿಆರ್-6:2004-05:1271, ದಿನಾಂಕ: 4ನೇ ಜನವರಿ 2005**

**ವಿಷಯ:** ಕಾರ್ಖಾನೆಗಳ ಉಪ ನಿರ್ದೇಶಕರು, ಹುಬ್ಬಳ್ಳಿ ವಿಭಾಗ-1, ರವರ ಕಛೇರಿಯಲ್ಲಿ ಹಳೆಯದಾದ ವಾಹನ ಸಂಖ್ಯೆ: ಸಿಕೆಜಿ:234, ಡಿಸೇಲ್ ಮೆಟಾಡಾರ್ ವಾಹನವನ್ನು ವಿಲೇ ಮಾಡುವ ಬಗ್ಗೆ.

**ಉಲ್ಲೇಖ:**
1) ಕರ್ನಾಟಕ ಸರ್ಕಾರಿ ನಡವಳಿಗಳು - ಆದೇಶ ಸಂಖ್ಯೆ: ಸಿಆಸುಇ 142 ಶಿವಾನಿ 2000, ಬೆಂಗಳೂರು ದಿ: 05.01.01.
2) ಕೇಂದ್ರ ಕಛೇರಿಯ ಪತ್ರದ ಸಂಖ್ಯೆ: ಈಎಸ್‌ಟಿ-1:ಇತರೇ:ಸಿಆರ್-46:2003-04, ದಿನಾಂಕ: 18.12.2003.
3) ಜಿಲ್ಲಾಧಿಕಾರಿ, ಧಾರವಾಡ, ರವರ ಪತ್ರ ಸಂಖ್ಯೆ: ಆಡಳಿತ:ವಾಹನ:ವಹಿ-9:2004-05, ದಿನಾಂಕ: 04.05.2004.
4) ಇನ್‌ಸ್ಪೆಕ್ಟರ್ ಆಫ್ ಮೋಟಾರ್ ವೆಹಿಕಲ್ಸ್ ರವರ ಪತ್ರದ ದಿನಾಂಕ: 11.07.2003.

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತಿಳಿಸುವುದೇನೆಂದರೆ, ಈ ಕಛೇರಿಯ ಕೆಳಕಂಡ ವಾಹನ ನಿರುಪಯುಕ್ತ ಸ್ಥಿತಿಯಲ್ಲಿ ಇದ್ದು, ದುರಸ್ತಿ ಮಾಡಲಾಗದಂತ ಸ್ಥಿತಿಯಲ್ಲಿ, ಮೂರು ಸಾವಿರ ಮಠ ಪ್ರೆಸ್; ಆವರಣದಲ್ಲಿ ನಿಲ್ಲಿಸಿದ್ದು, ದಿನಾಂಕ: 28.01.2005 ರಂದು 11.00 ಘಂಟೆಗೆ, ಈ ಕಛೇರಿಯ ಆವರಣದಲ್ಲಿ ಟೆಂಡರ್ ಕಂ ಬಹಿರಂಗ ಹರಾಜು ಮೂಲಕ ಮಾರಾಟ ಮಾಡಲಾಗುವುದು.

| ಕ್ರ.ಸಂ. | ವಾಹನ ನೋಂದಣಿ ಸಂಖ್ಯೆ | ವಾಹನದ ಮಾದರಿ |
|---|---|---|
| 1) | ಸಿಕೆಜಿ-234 ಮೆಟಾಡಾರ್ ವ್ಯಾನ್ (ಡಿಸೇಲ್) | - |

ಟೆಂಡರ್ ಕಂ ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಭಾಗವಹಿಸತಕ್ಕದ್ದು:

1) ಟೆಂಡರ್ ಫಾರಂ ಬೆಲೆ ರೂ.100.00 ಇದ್ದು, ನಿರ್ದೇಶಕರು, ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ, ಬೆಂಗಳೂರು, ಹೆಸರಿನಲ್ಲಿ ಡಿಮ್ಯಾಂಡ್ ಡ್ರಾಫ್ಟ್ ಪಡೆದು 10.1.2005 ರಿಂದ 20.1.2005 ರವರೆಗೆ ಕಛೇರಿಯಲ್ಲಿ ಪಡೆದು ದಿನಾಂಕ: 24.1.2005 ಒಳಗೆ ಸಲ್ಲಿಸುವುದು.
2) ಮೊಹರು ಮಾಡಿದ ಟೆಂಡರ್ ಲಕೋಟೆಯನ್ನು (ಕವರನ್ನು) ಕಾರ್ಖಾನೆಗಳ ಉಪ ನಿರ್ದೇಶಕರು, ಹುಬ್ಬಳ್ಳಿ ವಿಭಾಗ, ಈ ವಿಳಾಸಕ್ಕೆ ಕಳುಹಿಸಬೇಕು. ಲಕೋಟೆಯ ಮೇಲೆ ನಿರುಪಯುಕ್ತಗೊಳಿಸಿದ ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರ ಕಛೇರಿ ವಾಹನವನ್ನು ಖರೀದಿಸುವ ಬಗ್ಗೆ ವಾಹನ ಸಂಖ್ಯೆಯನ್ನು ನಮೂದಿಸಬೇಕು.
3) ಪ್ರತಿಯೊಬ್ಬ ಟೆಂಡರ್‌ದಾರರು : ಸವಾಲುದಾರರು ವಾಹನವೊಂದಕ್ಕೆ ರೂಪಾಯಿ 1000.00 (ಒಂದು ಸಾವಿರ ರೂಪಾಯಿಗಳು) ಠೇವಣಿ ಹಣವನ್ನು ನಗದು ರೂಪದಲ್ಲಿ, ಕಾರ್ಖಾನೆಗಳ ಉಪ ನಿರ್ದೇಶಕರ ಕಛೇರಿಯಲ್ಲಿ ಪಾವತಿಸಿ ರಶೀತಿ ಪಡೆದು ರಶೀತಿಯನ್ನು ಅರ್ಜಿಯ ಜತೆಗೆ ನೀಡತಕ್ಕದ್ದು; ಠೇವಣಿ ಇಲ್ಲದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು ಹಾಗೂ ಠೇವಣಿಗೆ ಯಾವುದೇ ಬಡ್ಡಿ ನೀಡಲಾಗುವುದಿಲ್ಲ.
4) ಟೆಂಡರ್ ಫಾರಂನಲ್ಲಿ ಅತಿ ಹೆಚ್ಚಿನ ಹಣವನ್ನು ಅಂಕಿ ಹಾಗೂ ಅಕ್ಷರಗಳೆರಡರಲ್ಲಿಯೂ ಬರೆಯಬೇಕು. ಟೆಂಡರ್ ಫಾರಂ ಬೆಲೆಯನ್ನು ಬರೆಯುವಾಗ ಏನಾದರೂ ತಿದ್ದುಪಡಿ ಮಾಡಿದ್ದರೆ ಆ ಸ್ಥಳದಲ್ಲಿ ಟೆಂಡರ್‌ದಾರರು ಪೂರ್ಣ ಸಹಿ ಮಾಡತಕ್ಕದ್ದು.
5) ಟೆಂಡರ್ ಫಾರಂ ವರ್ಗಾವಣೆ ಮಾಡಲಾಗುವುದಿಲ್ಲ.
6) ಟೆಂಡರು ಯಾವುದೇ ಷರತ್ತು ಹೊಂದಿರತಕ್ಕದಲ್ಲ ಮತ್ತು ಷರತ್ತು ಹೊಂದಿದ್ದರೆ ಅವುಗಳನ್ನು ತಿರಸ್ಕರಿಸಲಾಗುವುದು.
7) ಟೆಂಡರ್‌ದಾರರು ಬಹಿರಂಗ ಹರಾಜಿನಲ್ಲಿ ಹೆಚ್ಚಿನ ಠೇವಣಿ ಹಣವಿಲ್ಲದೇ ಭಾಗವಹಿಸಬಹುದು. ಠೇವಣಿ ತುಂಬಿದ ಠೇವಣಿದಾರರು ಹೊರತುಪಡಿಸಿ, ಸವಾಲುದಾರರು ಹರಾಜು ಮಾಡಬಯಸುವರು ವಾಹನಕ್ಕೆ ರೂ.1000.00 ಠೇವಣಿಯನ್ನು ಸ್ಥಳದಲ್ಲಿಯೇ ಪಾವತಿಸತಕ್ಕದ್ದು.

8) ಪೂರ್ಣಗೊಳಿಸಿದ ಟೆಂಡರ್ ಫಾರಂಗಳನ್ನು ದಿನಾಂಕ: 24.02.2005ರ ಸಂಜೆ 4.00 ಘಂಟೆಯವರೆಗೆ ಸ್ವೀಕರಿಸಲಾಗುವುದು. ನಂತರ ಬಂದ ಟೆಂಡರ್ ಫಾರಂಗಳನ್ನು ತಿರಸ್ಕರಿಸಲಾಗುವುದು.
9) ಕಾರ್ಖಾನೆಗಳ ಉಪ ನಿರ್ದೇಶಕರು, ಹುಬ್ಬಳ್ಳಿ, ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಬಹಿರಂಗ ಹರಾಜು ನಡೆಸುವರು. ಠೇವಣಿ ತುಂಬಿದ ಟೆಂಡರುದಾರರ ಸವಾಲುದಾರರಿಗೆ ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುತ್ತದೆ.
10) ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಬೆಲೆ (ಹಣವನ್ನು) ದಾಖಲುಗೊಳಿಸಿದ ನಂತರ, ಸ್ವೀಕೃತವಾದ ಟೆಂಡರ್‌ಗಳನ್ನು ಕ್ರ.ಸಂ.9 ರಲ್ಲಿನ ಅಧಿಕಾರಿಗಳು ಸಾರ್ವಜನಿಕ ಸಮಕ್ಷಮ ತೆರೆದು ಬಹಿರಂಗಪಡಿಸುವರು. ಈ ಎರಡರಲ್ಲಿ ಅತೀ ಹೆಚ್ಚಿನ ಹಣವನ್ನು ಯಾರು ನಮೂದಿಸಿರುವರೋ ಅವರನ್ನು ಯಶಸ್ವಿ ಟೆಂಡರ್ ಬಹಿರಂಗ ಸವಾಲುದಾರರೆಂದು ಪರಿಗಣಿಸಲಾಗುವುದು.
11) ಮೇಲೆ ತಿಳಿಸಿದ ವಾಹನವನ್ನು ಸ್ಕ್ರಾಪ್ಡ್ ಕಂಡಿಶನ್‌ನಲ್ಲಿ ಇರುವುದಾಗಿ ಮೋಟಾರ್ ವಾಹನ ಪರಿವೀಕ್ಷಕರು ಈಗಾಗಲೇ ವರದಿ ಮಾಡಿರುವುದರಿಂದ ಯಶಸ್ವಿ ಟೆಂಡರ್ : ಸವಾಲುಗಾರರಿಗೆ ವಾಹನ ಮಾಲೀಕತ್ವವನ್ನು ವರ್ಗಾವಣೆ ಮಾಡಲಾಗುವುದಿಲ್ಲ ಹಾಗೂ ಯಶಸ್ವಿ ಟೆಂಡರು : ಸವಾಲುದಾರರು ಸದರಿ ವಾಹನವನ್ನು ಯಥಾಸ್ಥಿತಿಯಲ್ಲಿ ತಮ್ಮ ವಶಕ್ಕೆ ಪಡೆದುಕೊಳ್ಳಬೇಕು.
12) ಮೊದಲನೇ ಅತಿ ಹೆಚ್ಚಿನ ಅಂತಿಮ ಬಹಿರಂಗ ಹರಾಜು-ಕಂ-ಟೆಂಡರ್‌ದಾರರು ಪೂರ್ಣ ಹಣವನ್ನು ಪಾವತಿಸಿದ ನಂತರವೇ, ಎರಡನೇ ಅತಿ ಹೆಚ್ಚಿನ ಅಂತಿಮ ಬಹಿರಂಗ ಹರಾಜು-ಕಂ-ಟೆಂಡರ್‌ದಾರ ಹಣವನ್ನು ವಾಪಸ್ಸು ಮಾಡಲಾಗುವುದು. ಒಂದು ವೇಳೆ ಮೊದಲನೇ ಅತೀ ಹೆಚ್ಚಿನ ಅಂತಿಮ ಬಹಿರಂಗ ಹರಾಜು-ಕಂ-ಟೆಂಡರ್‌ದಾರರು ಪೂರ್ಣ ಹಣ ಪಾವತಿಸದಿದ್ದಲ್ಲಿ ಅದೇ ದಿನ ಎರಡನೇ ಬಿಡ್‌ದಾರರು ಆರ್.ಟಿ.ಓ., ರವರು ನಿಗದಿಪಡಿಸಿದ ಹಣಕ್ಕಿಂತ ಹೆಚ್ಚಿಗೆ ಬಹಿರಂಗ ಹರಾಜು ಮತ್ತು ಟೆಂಡರ್ ಇದ್ದಲ್ಲಿ ಎರಡನೇ ಬಿಡ್‌ದಾರರಿಗೆ ನೀಡಲಾಗುವುದು.
13) ಅತೀ ಹೆಚ್ಚಿನ ಮೊತ್ತಕ್ಕೆ ಕೇಳುವ ಟೆಂಡರ್‌ದಾರರು : ಸವಾಲುದಾರರು ಒಪ್ಪಿಕೊಂಡ ನಂತರ ನಿರಾಕರಿಸಿದರೆ ಅವರು ತುಂಬಿದ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು; ಅಲ್ಲದೇ ಮತ್ತೊಮ್ಮೆ ಅಧಿಸೂಚನೆಯನ್ನು ಹೊರಡಿಸಿ ಬಹಿರಂಗ ಹರಾಜು ಮಾಡಲಾಗುವುದು. ಯಶಸ್ವಿ ಟೆಂಡರ್ ಸವಾಲುದಾರರು ನಿಯಮಗಳಂತೆ ಅನ್ವಯವಾಗುವ ಕರ್ನಾಟಕ ಮಾರಾಟ ತೆರಿಗೆ ಮತ್ತು ಇತರೇ ತೆರಿಗೆಗಳನ್ನು ಪ್ರತ್ಯೇಕವಾಗಿ ಭರಿಸಬೇಕಾಗುತ್ತದೆ.
14) ಯಶಸ್ವಿ ಬಿಡ್‌ದಾರರು ಸಂಪೂರ್ಣ ಹಣವನ್ನು ನಗದು ರೂಪದಲ್ಲಾಗಲೀ ಅಥವಾ ಡಿ.ಡಿ. ಮೂಲಕವಾಗಲೀ ತುಂಬಿ ರಶೀತಿ ಪಡೆಯಬಹುದು.
15) ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರ್‌ದಾರರಿಗೆ : ಸವಾಲುದಾರರಿಗೆ ಠೇವಣಿ ಹಣವನ್ನು ಸ್ಥಳದಲ್ಲಿಯೇ ಹಿಂದಿರುಗಿಸಲಾಗುವುದು.
16) ಹರಾಜು ಮಾಡುವ ವೇಳೆಯಲ್ಲಿ ಏನಾದರೂ ತಕರಾರುಗಳು ಬಂದಲ್ಲಿ ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರು, ಬೆಂಗಳೂರು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ಕೈಗೊಳ್ಳುವ ನಿರ್ಣಯವೇ ಅಂತಿಮವಾಗಿರುತ್ತದೆ.
17) ಸವಾಲನ್ನು : ಟೆಂಡರನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ಅಂಗೀಕರಿಸುವ ಅಥವಾ ಮುಂದೂಡುವ ಅಧಿಕಾರವನ್ನು ಕಾರ್ಖಾನೆಗಳ ಉಪ ನಿರ್ದೇಶಕರು, ಹುಬ್ಬಳ್ಳಿ, ರವರು ಹೊಂದಿರುತ್ತಾರೆ.
18) ಇಚ್ಛಿಯುಳ್ಳವರು ಹರಾಜು ಮಾಡಲ್ಪಡುವ ಈ ನಿರುಪಯುಕ್ತ ವಾಹನವನ್ನು, ಕಾರ್ಖಾನೆಗಳ ಉಪ ನಿರ್ದೇಶಕರು, ಹುಬ್ಬಳ್ಳಿ ವಿಭಾಗ-1, ಯವರ ಕಛೇರಿಗೆ, ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ನೋಡಬಹುದು. ಸದರಿ ವಾಹನವನ್ನು, ಮೂರು ಸಾವಿರ ಮಠ ಪ್ರೆಸ್, ಬಸವನ ವನ ಎದುರಿಗೆ, ಕಾಟನ್ ಮಾರ್ಕೆಟ್, ಹುಬ್ಬಳ್ಳಿ, ಇಲ್ಲಿ ಪರಿಶೀಲನೆಗೆ ಇಡಲಾಗಿದೆ.

ಪಿ.ಆರ್. 29 ಕಾರ್ಖಾನೆಗಳ ಉಪ ನಿರ್ದೇಶಕರು, ಹುಬ್ಬಳ್ಳಿ ವಿಭಾಗ-1, ಹುಬ್ಬಳ್ಳಿ.

**ತಾಂತ್ರಿಕ ಶಿಕ್ಷಣ ಇಲಾಖೆ**

**ಪ್ರಾಚಾರ್ಯರವರ ಕಾರ್ಯಾಲಯ, ವಿ.ಐ.ಎಸ್.ಎಸ್.ಜೆ. ಸರ್ಕಾರಿ ಪಾಲಿಟೆಕ್ನಿಕ್, ಭದ್ರಾವತಿ**

**ಹರಾಜು ಪ್ರಕಟಣೆ ಸಂಖ್ಯೆ: ವಿಸಪಾಭ:ರಿಜಿಸ್ಟ್ರಾರ್:142:2004-05 ದಿನಾಂಕ: 10ನೇ ಜನವರಿ 2005**

**ವಿಷಯ:** ವಿ.ಐ.ಎಸ್.ಎಸ್.ಜೆ. ಸರ್ಕಾರಿ ಪಾಲಿಟೆಕ್ನಿಕ್‌ನ ಆವರಣದಲ್ಲಿರುವ ತೆಂಗಿನ ಮರದ ಕಾಯಿಗಳನ್ನು ಟೆಂಡರ್ ಮೂಲಕ ವಿಲೇವಾರಿ ಮಾಡುವ ಬಗ್ಗೆ ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ: 2.2.2005 ಮಧ್ಯಾಹ್ನ 4.00 ಗಂಟೆಗೆ.

**ಉಲ್ಲೇಖ:** ಈ ಸಂಸ್ಥೆಯ ಹರಾಜು ಪ್ರಕಟಿಸಿ ಸಂಖ್ಯೆ: ವಿಸಪಾಭ:ರಿಜಿಸ್ಟ್ರಾರ್:142:2004-05.

ವಿಐಎಸ್ಎಸ್‌ಜೆ ಸರ್ಕಾರಿ ಪಾಲಿಟೆಕ್ನಿಕ್ ಆವರಣದಲ್ಲಿ ಒಟ್ಟು 50 ತೆಂಗಿನ ಮರಗಳಿದ್ದು ಎಲ್ಲಾ ಮರಗಳು ಉತ್ತಮ ಫಲಗಳನ್ನು ನೀಡುತ್ತವೆ. ಸದರಿ ಮರಗಳಲ್ಲಿ ಬಲಿತ ತೆಂಗಿನ ಕಾಯಿಗಳನ್ನು ಕಿತ್ತುಕೊಳ್ಳಲು ಮತ್ತು ಅದರ ಉತ್ಪನ್ನಗಳನ್ನು ಅಂದರೆ ತೆಂಗಿನ ಗರಿ ಮಟ್ಟೆಯನ್ನು ಒಂದು ವರ್ಷದವರೆಗೆ ಕಾಂಟ್ರಾಕ್ಟ್ ಪಡೆಯಲು ಮೊಹರಾದ ಟೆಂಡರನ್ನು ದಿನಾಂಕ: 2.2.2005 ಮಧ್ಯಾಹ್ನ 4.00 ಗಂಟೆಯೊಳಗೆ ಸಲ್ಲಿಸಲು ಸೂಚಿಸಿದೆ.

**ಷರತ್ತುಗಳು:**

1. ಟೆಂಡರುದಾರರು ರೂ.500.00 ಗಳ ಇಎಂಡಿ ಹಣವನ್ನು ನೀಡಬೇಕಾಗಿರುತ್ತದೆ. ಈ ಹಣವನ್ನು ಟೆಂಡರ್ ಮುಗಿದ ನಂತರ ಹಿಂದಿರುಗಿಸಲಾಗುವುದು.
2. ಹೆಚ್ಚಿನ ಟೆಂಡರ್‌ದಾರರಿಂದ ಸೂಕ್ತ ಬಿಡ್ಡಿಂಗ್ ಅಮೌಂಟಿಗೆ ಹೊಂದಾಣಿಕೆಯಾಗದಿದ್ದಲ್ಲಿ ಟೆಂಡರ್ ಅನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಲಾಗಿದೆ.
3. ವಿಜೇತ ಟೆಂಡರ್‌ದಾರರು ಮಾರನೇ ದಿನದೊಳಗಾಗಿ ಪೂರ್ತಿ ಹಣವನ್ನು ಪಾವತಿ ಮಾಡುವುದು. ಇಲ್ಲದಿದ್ದಲ್ಲಿ ಅವರ ಇಎಂಡಿ ಹಣವನ್ನು ಮುಟ್ಟುಗೋಲು ಹಾಕಲಾಗುವುದು.
4. ವಿಜೇತ ಟೆಂಡರ್‌ದಾರರು ಕೇವಲ ಬಲಿತ ಕಾಯಿಗಳನ್ನು ಮಾತ್ರ ಕಿತ್ತುಕೊಳ್ಳಲು ಹಕ್ಕಿರುತ್ತದೆ. ಎಳೆ ನೀರನ್ನು ಕೀಳಲು ಹಾಗೂ ತೆಂಗಿನ ಗರಿಗಳನ್ನು ಕಿತ್ತುಕೊಳ್ಳುವುದಾಗಲಿ ಅಥವಾ ತೆಂಗಿನ ಮರಕ್ಕೆ ಜಖಂ ಆಗದ ಹಾಗೆ ನೋಡಿಕೊಳ್ಳುವುದು.

ಪಿ.ಆರ್. 40 ಪ್ರಾಚಾರ್ಯರು, ವಿಐಎಸ್ಎಸ್‌ಜೆ ಸರ್ಕಾರಿ ಪಾಲಿಟೆಕ್ನಿಕ್, ಭದ್ರಾವತಿ.

**ತೋಟಗಾರಿಕೆ ಇಲಾಖೆ**

**ಬೆಂಗಳೂರು ಗ್ರಾಮಾಂತರ ಜಿಲ್ಲೆ**

**ತೋಟಗಾರಿಕೆ ಉಪನಿರ್ದೇಶಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್, ಕಬ್ಬನ್ ಪಾರ್ಕ್, ಬೆಂಗಳೂರು**

**ಜಿಲ್ಲಾವಲಯ ತೋಟಗಾರಿಕಾ ಕ್ಷೇತ್ರಗಳ ಫಸಲುಗಳ ವಿಲೇವಾರಿಗಾಗಿ ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ: ತೋಉನಿ:ಬೆಂಗ್ರಾಜಿಪ:ಸತೋಅ2:59:2003-04, ದಿನಾಂಕ: 4ನೇ ಜನವರಿ 2005**

2005ನೇ ಸಾಲಿನ ತೋಟಗಾರಿಕೆ ಉಪನಿರ್ದೇಶಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್‌ಪಾರ್ಕ್, ಬೆಂಗಳೂರು-01 ರವರ ಅಧೀನದಲ್ಲಿ ಬರುವ ಈ ಕೆಳಕಂಡ ತೋಟಗಾರಿಕೆ ಕ್ಷೇತ್ರಗಳ ಮೊದಲನೇ ಅವಧಿಯ (ದಿನಾಂಕ: 1.1.2005 ರಿಂದ 30.6.2005 ರವರೆಗೆ) ಸಪೋಟ,

ಸೀಬೆ ಮತ್ತು ಪೂರ್ಣ ಅವಧಿಯ (ದಿನಾಂಕ: 1.1.2005 ರಿಂದ 31.12.2005 ರವರೆಗೆ) ತೆಂಗು,ಹಲಸು ಮತ್ತು ಹುಣಸೆ ಫಸಲುಗಳ ವಿಲೇವಾರಿಗೆ ಇಲಾಖೆಯ ಪರಿಷ್ಕೃತ ನಿಯಮಾವಳಿಗಳ ರೀತ್ಯ ಟೆಂಡರ್ ಪ್ರಕಟಣೆ ಹೊರಡಿಸಿ ಸದರಿ ಕ್ಷೇತ್ರದ ಹೆಸರಿನ ಮುಂದೆ ನಮೂದಿಸಿರುವ ದಿನಾಂಕ ಮತ್ತು ವೇಳೆಯಲ್ಲಿ ಟೆಂಡರ್ ಮತ್ತು ಟೆಂಡರ್ ಕಂ ಬಹಿರಂಗ ಹರಾಜನ್ನು ತೋಟಗಾರಿಕೆ ಉಪನಿರ್ದೇಶಕರು (ಜಿಪಂ) ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್ ಪಾರ್ಕ್, ಬೆಂಗಳೂರು-01 ರವರ ಕಛೇರಿಯಲ್ಲಿ ನಡೆಸಲಾಗುವುದು. ಆಸಕ್ತಿಯುಳ್ಳ ಸಾರ್ವಜನಿಕರು ಮತ್ತು ಹಣ್ಣಿನ ವ್ಯಾಪಾರಿಗಳು ಸರಿಯಾದ ಸಮಯಕ್ಕೆ ಹಾಜರಿದ್ದು ಟೆಂಡರ್ : ಬಹಿರಂಗ ಹರಾಜಿನ ಪ್ರಕ್ರಿಯೆಯಲ್ಲಿ ಭಾಗವಹಿಸಲು ಕೋರಲಾಗಿದೆ.

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರದ ಹೆಸರು | ಫಸಲು | ಗಿಡಗಳ ಸಂಖ್ಯೆ | ಠೇವಣಿ ಮೊತ್ತ | ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ | ಟೆಂಡರ್ ಅಥವಾ ಬಹಿರಂಗ ಹರಾಜು | ಟೆಂಡರ್ : ಹರಾಜು ನಡೆಸುವ ದಿನ ಮತ್ತು ವೇಳೆ |
|---|---|---|---|---|---|---|---|
| 1 | ಬೈರಾಪಟ್ಟಣ ತೋಟಗಾರಿಕೆ ಕ್ಷೇತ್ರ ಚನ್ನಪಟ್ಟಣ ತಾಲ್ಲೂಕು | ಸಪೋಟ | 1126 | 10000.00 | 10.2.05 ಮಧ್ಯಾಹ್ನ 1.30 ಗಂಟೆಯೊಳಗೆ | ಟೆಂಡರ್ | 10.2.05 ಮಧ್ಯಾಹ್ನ 2.30 |
| | | ತೆಂಗು | 63 | 1000.00 | 10.2.05 ಮಧ್ಯಾಹ್ನ 1.30 ಗಂಟೆಯೊಳಗೆ | ಟೆಂಡರ್ ಕಂ ಬಹಿರಂಗ ಹರಾಜು | 10.2.05 ಮಧ್ಯಾಹ್ನ 3.00 |
| | | ಹುಣಸೆ | 3 | 200.00 | 10.2.05 ಮಧ್ಯಾಹ್ನ 1.30 ಗಂಟೆಯೊಳಗೆ | ಟೆಂಡರ್ ಕಂ ಬಹಿರಂಗ ಹರಾಜು | 10.2.05 ಮಧ್ಯಾಹ್ನ 3.30 |
| | | ಹಲಸು | 7 | 500.00 | 10.2.05 ಮಧ್ಯಾಹ್ನ 1.30 ಗಂಟೆಯೊಳಗೆ | ಟೆಂಡರ್ ಕಂ ಬಹಿರಂಗ ಹರಾಜು | 10.2.05 ಸಂಜೆ 4.00 |
| 2 | ವಂದಾರಗುಪ್ಪೆ ತೋಟಗಾರಿಕೆ ಕ್ಷೇತ್ರ ಚನ್ನಪಟ್ಟಣ ತಾಲ್ಲೂಕು | ಸಪೋಟ | 185 | 5000.00 | 10.2.05 ಮಧ್ಯಾಹ್ನ 1.30 ಗಂಟೆಯೊಳಗೆ | ಟೆಂಡರ್ | 10.2.05 ಸಂಜೆ 4.30 |
| | | ತೆಂಗು | 225 | 1000.00 | 10.2.05 ಮಧ್ಯಾಹ್ನ 1.30 ಗಂಟೆಯೊಳಗೆ | ಟೆಂಡರ್ ಕಂ ಬಹಿರಂಗ ಹರಾಜು | 10.2.05 ಸಂಜೆ 5.00 |
| 3 | ಹಾರೋಹಳ್ಳಿ ತೋಟಗಾರಿಕೆ ಕ್ಷೇತ್ರ ಮಾಗಡಿ ತಾಲ್ಲೂಕು | ಸಪೋಟ | 140 | 5000.00 | 15.2.05 ಮಧ್ಯಾಹ್ನ 1.30 ಗಂಟೆಯೊಳಗೆ | ಟೆಂಡರ್ ಕಂ ಬಹಿರಂಗ ಹರಾಜು | 15.2.05 ಮಧ್ಯಾಹ್ನ 3.00 |
| | | ತೆಂಗು | 90 | 1000.00 | 15.2.05 ಮಧ್ಯಾಹ್ನ 1.30 ಗಂಟೆಯೊಳಗೆ | ಟೆಂಡರ್ ಕಂ ಬಹಿರಂಗ ಹರಾಜು | 15.2.05 ಮಧ್ಯಾಹ್ನ 3.30 |
| 4 | ದಂಡೂಪಾಳ್ಯ ತೋಟಗಾರಿಕೆ ಕ್ಷೇತ್ರ ಹೊಸಕೋಟೆ ತಾಲ್ಲೂಕು | ಸಪೋಟ | 24 | 500.00 | 16.2.05 ಮಧ್ಯಾಹ್ನ 1.30 ಗಂಟೆಯೊಳಗೆ | ಟೆಂಡರ್ ಕಂ ಬಹಿರಂಗ ಹರಾಜು | 16.2.05 ಮಧ್ಯಾಹ್ನ 3.00 |
| | | ಸೀಬೆ | 50 | 500.00 | 16.2.05 ಮಧ್ಯಾಹ್ನ 1.30 ಗಂಟೆಯೊಳಗೆ | ಟೆಂಡರ್ ಕಂ ಬಹಿರಂಗ ಹರಾಜು | 16.2.05 ಮಧ್ಯಾಹ್ನ 3.30 |
| | | ತೆಂಗು | 80 | 500.00 | 16.2.05 ಮಧ್ಯಾಹ್ನ 1.30 ಗಂಟೆಯೊಳಗೆ | ಟೆಂಡರ್ ಕಂ ಬಹಿರಂಗ ಹರಾಜು | 16.2.05 ಮಧ್ಯಾಹ್ನ 4.00 |
| | | ಹಲಸು | 10 | 200.00 | 16.2.05 ಮಧ್ಯಾಹ್ನ 1.30 ಗಂಟೆಯೊಳಗೆ | ಟೆಂಡರ್ ಕಂ ಬಹಿರಂಗ ಹರಾಜು | 16.2.05 ಮಧ್ಯಾಹ್ನ 4.30 |

**ವಿಶೇಷ ಸೂಚನೆ:** ಎಲ್ಲ ಕ್ಷೇತ್ರಗಳ ಟೆಂಡರ್ ಮತ್ತು ಟೆಂಡರ್ ಕಂ ಬಹಿರಂಗ ಹರಾಜನ್ನು ತೋಟಗಾರಿಕೆ ಉಪನಿರ್ದೇಶಕರು (ಜಿಪಂ) ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್ ಪಾರ್ಕ್, ಬೆಂಗಳೂರು-01 ರವರ ಕಛೇರಿಯಲ್ಲಿ ನಡೆಸಲಾಗುವುದು. ಮತ್ತು ಸೀಲ್ ಮಾಡಿದ ಟೆಂಡರ್ ಲಕೋಟೆಗಳನ್ನು ಸಹ ತೋಟಗಾರಿಕೆ ಉಪನಿರ್ದೇಶಕರು (ಜಿಪಂ) ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರ ಕಛೇರಿಯಲ್ಲಿಯೇ ನಿಗದಿತ ದಿನಾಂಕ ಮತ್ತು ವೇಳೆಯಲ್ಲಿಯೇ ಸಲ್ಲಿಸತಕ್ಕದ್ದು.

ಟೆಂಡರ್ ಫಾರಂಗಳನ್ನು ರೂ.25.00 ಪಾವತಿ ಮಾಡಿ ಸಂಬಂಧಪಟ್ಟ ಕ್ಷೇತ್ರಗಳ ತಾಲ್ಲೂಕಿನ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿ.ಪಂ.) : ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿ.ಪಂ.) : ತೋಟಗಾರಿಕೆ ಉಪನಿರ್ದೇಶಕರು (ಜಿಪಂ) ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರ ಕಛೇರಿಯಲ್ಲಿ ಪಡೆಯಬೇಕು. ಟೆಂಡರ್‌ದಾರರು ನಿಗದಿಪಡಿಸಿದ ಠೇವಣಿ ಮೊತ್ತ ಮತ್ತು ಫಸಲಿಗೆ ತಾವು ನಮೂದಿಸಿರುವ **ಟೆಂಡರ್ ಮೊತ್ತದ ಶೇಕಡ 50 ಭಾಗದ ಮೊತ್ತವನ್ನು ಅಡ್ಡಗೆರೆ** ಎಳೆದ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಆಯಾಯ ಕ್ಷೇತ್ರಗಳ ತಾಲ್ಲೂಕಿನ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿ.ಪಂ.) : ಸಹಾಯಕ ತೋಟಗಾರಿಕೆ ನಿರ್ದೇಶಕರು (ಜಿ.ಪಂ.) ರವರ ಹೆಸರಿನಲ್ಲಿ ಪಡೆದು ಟೆಂಡರ್ ಜೊತೆ ಕಡ್ಡಾಯವಾಗಿ ಲಗತ್ತಿಸಬೇಕು. ಟೆಂಡರ್‌ದಾರರು ಭರ್ತಿ ಮಾಡಿದ ಮೊಹರಾದ ಟೆಂಡರ್ ಫಾರಂಗಳನ್ನು ನಿಗದಿಪಡಿಸಿದ ದಿನಾಂಕದಂದು ನಿಗದಿತ ವೇಳೆಯಲ್ಲಿ ತೋಟಗಾರಿಕೆ ಉಪನಿರ್ದೇಶಕರು (ಜಿಪಂ) ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್ ಪಾರ್ಕ್, ಬೆಂಗಳೂರು-01 ರವರ ಕಛೇರಿಯಲ್ಲಿಯೇ ತಪ್ಪದೆ ಸಲ್ಲಿಸತಕ್ಕದ್ದು.

ಬಹಿರಂಗ ಹರಾಜಿನಲ್ಲಿ ಬಿಡ್ಡು ಮಾಡುವವರು ಸಹ ನಿಗದಿಪಡಿಸಿದ ಠೇವಣಿ ಹಣವನ್ನು ಡಿ.ಡಿ. ರೂಪದಲ್ಲಿ ಸಲ್ಲಿಸಿ ಬಿಡ್ಡು ಮಾಡಲು ಅರ್ಹತೆಯನ್ನು ಪಡೆಯಬೇಕು. ಬಿಡ್ಡಿನ ಮೊತ್ತಗಳಲ್ಲಿ **ಅತೀ ಹೆಚ್ಚಿನ ಮೊತ್ತದ ಬಿಡ್ಡುದಾರರು ಸಹ ಬಿಡ್ಡಿನ ಮೊತ್ತದ ಶೇಕಡ 50 ಭಾಗದ ಮೊತ್ತವನ್ನು ಸ್ಥಳದಲ್ಲೇ ಡಿ.ಡಿ. ರೂಪದಲ್ಲಿ ಪಾವತಿ ಮಾಡಬೇಕು.**

ಮೇಲಿನ ತೋಟಗಾರಿಕೆ ಕ್ಷೇತ್ರಗಳ ಫಸಲನ್ನು ಟೆಂಡರ್ : ಹರಾಜು ಅನುಮೋದನೆಯಾದ ದಿನಾಂಕದಿಂದ ಹತ್ತು ದಿನಗಳೊಳಗೆ ಪೂರ್ಣ ಮೊಬಲಗು ಪಾವತಿ ಮಾಡಿ ಫಸಲನ್ನು ರೂಢಿಸಿಕೊಳ್ಳಬಹುದು. ಟೆಂಡರ್ : ಬಿಡ್ಡನ್ನು ಅಂಗೀಕರಿಸುವ ಅಧಿಕಾರವನ್ನು ತೋಟಗಾರಿಕೆ ನಿರ್ದೇಶಕರು ಪಡೆದಿರುತ್ತಾರೆ. ಇಲಾಖಾ ಅಧಿಕಾರಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ. ಹೆಚ್ಚಿನ ಪರಿಷ್ಕೃತ ನಿಯಮಾವಳಿ ವಿವರಗಳು, ನಿಬಂಧನೆ, ಷರತ್ತುಗಳನ್ನು ಈ ಕಛೇರಿಯಲ್ಲಿ ಅಥವಾ ಕ್ಷೇತ್ರಗಳಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ತೋಟಗಾರಿಕೆ ಉಪನಿರ್ದೇಶಕರು,
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್ ಪಾರ್ಕ್, ಬೆಂಗಳೂರು.

ಪಿ.ಡಿ.5

**ಜಲ ಸಂಪನ್ಮೂಲ ಇಲಾಖೆ**
**ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ**
**ಟೆಂಡರ್ ತಿದ್ದುಪಡಿ ಪ್ರಕಟಣೆ 2004-05**

**ಅಲ್ಪಾವಧಿ ಟೆಂಡರ್ ಪ್ರಕಟಣೆ ಸಂಖ್ಯೆ: ಬಿಡಿಎನ್-4/ಪಿ.ಬಿ.-4/ಟೆಂಡರ್ ಪ್ರಕಟಣೆ/2004-05/2997,**
**ದಿನಾಂಕ: 26ನೇ ನವೆಂಬರ್ 2004 ರಲ್ಲಿ ಹೊರಡಿಸಿರುವ ಟೆಂಡರ್ ಪ್ರಕಟಣೆಯಲ್ಲಿ ಈ ಕೆಳಗಿನಂತೆ ತಿದ್ದುಪಡಿ ಮಾಡಲಾಗಿದೆ.**

1) ನಿಗದಿತ ಖಾಲಿ ಟೆಂಡರ್ ಫಾರಂಗಳನ್ನು ಕೋರಿ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕ: : 24.1.2005 ಸಂಜೆ 5.30 ಗಂಟೆಯವರೆಗೆ
2) ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ : 27.1.2005
3) ತುಂಬಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ : 28.1.2005 ಸಂಜೆ 4.00 ಗಂಟೆಯವರೆಗೆ

ಟೆಂಡರ್ ಪ್ರಕಟಣೆಯ ಉಳಿದ ಷರತ್ತುಗಳಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಎ. ಮಲ್ಲೇಗೌಡ
ಪಿ.ಆರ್. 41 ಕಾರ್ಯಪಾಲಕ ಇಂಜಿನಿಯರ್, ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ.

**FORM - IV**
**(See Rule 12)**
**NOTICE**

It is hereby notified that the undersigned has changed his name from **MOHAMMED SHARIF GALPYA** to **MOHAMMED SHARIF SOUDAGAR.**

PD. 11 **MOHAMMED SHARIF SOUDAGAR.**

**FORM - 1**
**(See Rule 9)**
**HIGH COURT OF KARNATAKA, BANGALORE**
**NOTIFICATION Dated: 16th November 2004**

**SMT K.S. MANGALA,** Working as Typist in the High Court of Karnataka is permitted to change her name to **'NAMRATHA AKSHAYA'.**

By Order of Hon'ble the Acting Chief Justice,
PD. 6 **R. VENKATESH**
Registrar (Judicial).

**FORM - 1**
**(See Rule 9)**
**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು**
**NOTIFICATION Dated: 12th May 2004**

**SMT. PARVATHI SESHAGIRI SHIRAGUPPI,** Working as Lady Health Visitor in the Health Department office of / P.H.C. Turavehal, Tq: Sindhanur, Dist: Raichur is permitted to change her name to **SMT. PARVATHI SUDHEER TEMBE.**

ಪಿ.ಡಿ. 7 ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು

**ಪೊಲೀಸು ಅಧೀಕ್ಷಕರ ಕಛೇರಿ, ಉಡುಪಿ ಜಿಲ್ಲೆ, ಉಡುಪಿ**
**ಟೆಂಡರ್ ಕಂ ಬಹಿರಂಗ ಹರಾಜು ಸಂಖ್ಯೆ: ಎಸಿಟಿ-ಎ3/30/2003-04**

**ವಿಷಯ:** ನಿರುಪಯುಕ್ತಗೊಳಿಸಲಾಗಿರುವ ಎಂಇಜಿ 9687 (ಜೀಪು) ವಾಹನವನ್ನು ಟೆಂಡರ್ ಕಂ ಬಹಿರಂಗ ಹರಾಜು ಮಾಡುವ ಕುರಿತು.-

**ಉಲ್ಲೇಖ:** ಪೊಲೀಸು ಪ್ರಧಾನ ಕಛೇರಿ ಪತ್ರ ಸಂಖ್ಯೆ: ವಾಸಾ (1) 71/2003-04 ದಿನಾಂಕ: 09.12.2003.

ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಉಲ್ಲೇಖಿತ ಆದೇಶದಲ್ಲಿ ನಿರುಪಯುಕ್ತಗೊಳಿಸಲಾಗಿರುವ ಉಡುಪಿ ಜಿಲ್ಲಾ ಪೊಲೀಸ್‌ನ ಈ ಕೆಳಗಿನ ವಾಹನವನ್ನು ದಿನಾಂಕ: 16.02.2005 ರಂದು ಬೆಳಗ್ಗೆ 11.00 ಗಂಟೆಗೆ ಉಡುಪಿ ಜಿಲ್ಲಾ ಸಶಸ್ತ್ರ ಮೀಸಲು ಪಡೆ ಕಛೇರಿಯ ಆವರಣದಲ್ಲಿ ಇರುವ ಸ್ಥಳದಲ್ಲಿ ಇರುವ ಸ್ಥಿತಿಯಲ್ಲಿಯೇ ಟೆಂಡರ್ ಕಂ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.

| ಕ್ರಮ ಸಂಖ್ಯೆ | ನೋಂದಣಿ ಸಂಖ್ಯೆ | ಉತ್ಪಾದಿತ ವರ್ಷ | ಉತ್ಪಾದಕರು | ವಾಹನ ವಿಧ |
|---|---|---|---|---|
| 1 | ಎಂಇಜಿ 9687 | 1980 | ಮಹೀಂದ್ರಾ | ಜೀಪು |

ಮೇಲ್ಕಂಡ ವಾಹನವನ್ನು ಸಾರ್ವಜನಿಕ ವೀಕ್ಷಣೆ / ಪರಿಶೀಲನೆಗಾಗಿ ಉಡುಪಿ ಜಿಲ್ಲಾ ಸಶಸ್ತ್ರ ಮೀಸಲು ಪಡೆ ಕಛೇರಿಯ ಆವರಣ, ಚಂದು ಮೈದಾನ, ಉಡುಪಿ ಇಲ್ಲಿ ನಿಲ್ಲಿಸಲಾಗಿದೆ.

ಟೆಂಡರು ಫಾರಂ, ನಿಬಂಧನೆ ಮತ್ತು ಷರತ್ತುಗಳ ವಿವರಗಳನ್ನು ಜಿಲ್ಲಾ ಪೊಲೀಸು ಕಛೇರಿ, ಉಡುಪಿ ಜಿಲ್ಲೆ, ಉಡುಪಿಯಿಂದ ಪಡೆಯಬಹುದು.

ಭರ್ತಿ ಮಾಡಿದ ಟೆಂಡರು ಫಾರಂಗಳನ್ನು ದಿನಾಂಕ: 15.02.2005 ರಂದು 5.00 ಗಂಟೆಯ ಒಳಗಾಗಿ ಈ ಕಛೇರಿಗೆ ತಲುಪುವಂತೆ ಸಲ್ಲಿಸಲು ಸೂಚಿಸಲಾಗಿದೆ.

**ನಿಬಂಧನೆ ಮತ್ತು ಷರತ್ತುಗಳು:**

1. ಟೆಂಡರು ಫಾರಂಗಳನ್ನು ದ್ವಿಪ್ರತಿಯಲ್ಲಿ ವಾಹನ ಸಂಖ್ಯೆ ಹಾಗೂ ಬೆಲೆಗಳನ್ನು ಸ್ಪಷ್ಟವಾಗಿ ನಮೂದಿಸಿ, ಅರ್ನೆಸ್ಟ್ ಮನಿ ರೂ.500/-ರ ಡಿ.ಡಿ.ಯನ್ನು (ಪೊಲೀಸು ಅಧೀಕ್ಷಕರು, ಉಡುಪಿ ಜಿಲ್ಲೆ, ಉಡುಪಿ ರವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳಿಂದ ಪಡೆಯಲಾದ ಡಿಡಿ ಯನ್ನು ಮಾತ್ರ ಸಲ್ಲಿಸುವುದು) ಒಂದು ಲಕೋಟೆಯಲ್ಲಿಟ್ಟು ಮೊಹರು ಮಾಡಿರಬೇಕು. ಲಕೋಟೆಯ ಮೇಲೆ ಮೋಟಾರು ವಾಹನ ಖರೀದಿಸುವುದಕ್ಕಾಗಿ ಟೆಂಡರು ಎಂದು ನಮೂದಿಸಿ ಪೊಲೀಸು ಅಧೀಕ್ಷಕರು, ಉಡುಪಿ ಜಿಲ್ಲೆ, ಉಡುಪಿ ರವರಿಗೆ ದಿನಾಂಕ: 15.02.2005ರ ಸಂಜೆ 5.00 ಗಂಟೆಯ ಒಳಗಾಗಿ ತಲುಪುವಂತೆ ಸಲ್ಲಿಸಬೇಕು.
2. ಟೆಂಡರ್ ಫಾರಂಗಳನ್ನು ವರ್ಗಾಯಿಸಬಾರದು, ಅರ್ನೆಸ್ಟ್ ಮನಿ ಇಲ್ಲದೆ ಸಲ್ಲಿಸಲಾದ ಟೆಂಡರ್ ಫಾರಂಗಳನ್ನು ತಿರಸ್ಕರಿಸಲಾಗುವುದು ಹಾಗೂ ಟೆಂಡರ್ ಫಾರಂಗಳೊಂದಿಗೆ ಸಲ್ಲಿಸಲಾದ ಅರ್ನೆಸ್ಟ್ ಮನಿಗೆ ಬಡ್ಡಿಯನ್ನು ನೀಡುವುದಿಲ್ಲ.
3. ಸಾರ್ವಜನಿಕರು ಹರಾಜಿನಲ್ಲಿ ಭಾಗವಹಿಸಲು ದಿನಾಂಕ: 16.02.2005 ರಂದು ಬೆಳಗ್ಗೆ 10.30 ಗಂಟೆಯ ಒಳಗಾಗಿ ರೂ.500/- ಗಳ ನಗದು ಠೇವಣಿಯನ್ನು ಪಾವತಿ ಮಾಡಿ ಹರಾಜಿನಲ್ಲಿ ಭಾಗವಹಿಸಬಹುದು. ಅರ್ನೆಸ್ಟ್ ಮನಿಯೊಂದಿಗೆ ಟೆಂಡರು ಸಲ್ಲಿಸಲಾದವರು ದಿನಾಂಕ: 16.02.2005ರ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು. ಹರಾಜಿನಲ್ಲಿ ಯಶಸ್ವಿಯಾಗದವರಿಗೆ ಠೇವಣಿಯನ್ನು ಕೂಡಲೆ ಹಿಂದಿರುಗಿಸಲಾಗುವುದು.
4. ಟೆಂಡರು ಫಾರಂಗಳಲ್ಲಿ ಯಾವುದೇ ತಿದ್ದುಪಡಿ ಇದ್ದಲ್ಲಿ ಅದನ್ನು ಪೂರ್ಣ ಸಹಿಯೊಂದಿಗೆ ದೃಢೀಕರಿಸತಕ್ಕದ್ದು.
5. ಪೊಲೀಸು ಅಧೀಕ್ಷಕರು, ಉಡುಪಿ ಜಿಲ್ಲೆ, ಉಡುಪಿಯವರ ಮೇಲು ಉಸ್ತುವಾರಿಯಲ್ಲಿ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳು ದಿನಾಂಕ: **16.02.2005** ರಂದು ಹರಾಜನ್ನು ನಡೆಸುವರು, ಹರಾಜಿನ ನಂತರ ಮೊಹರಾದ ಟೆಂಡರುಗಳನ್ನು ಬಿಡ್‌ದಾರರ ಅಥವಾ ಅವರ ಏಜೆಂಟರ ಸಮ್ಮುಖದಲ್ಲಿ ಅದೇ ದಿನದಂದು ತೆರೆಯುವರು. ಹರಾಜಿನಲ್ಲಿ ಅಥವಾ ಟೆಂಡರು ಇವುಗಳಲ್ಲಿ ಯಾವುದರಲ್ಲಿ ಹೆಚ್ಚಿನ ಮೊತ್ತ ದೊರಕುವುದೊ ಅದನ್ನು ಪರಿಗಣಿಸಲಾಗುವುದು.
6. ಹರಾಜಿನಲ್ಲಿ ಯಶಸ್ವಿಯಾದವರು ಒಟ್ಟು ಮೊತ್ತದಲ್ಲಿ ಶೇ.25 ರಷ್ಟನ್ನು ಕೂಡಲೇ ಪೊಲೀಸು ಅಧೀಕ್ಷಕರ ಕಛೇರಿಯ ನಗದು ಶಾಖೆಗೆ ಪಾವತಿಸುವುದು. ದೃಢಪತ್ರ ತಲುಪಿದ 8 (ಎಂಟು) ದಿನಗಳೊಳಗಾಗಿ ಬಾಕಿ ಮೊತ್ತ ಶೇ.75 ನ್ನು ಮತ್ತು ತೆರಿಗೆ (ತೆರಿಗೆ ಮೊತ್ತವನ್ನು ಮಾರಾಟ ದಿನದಂದು ಅನ್ವಯಿಸುವಂತೆ ಪ್ರತ್ಯೇಕವಾಗಿ ವಿಧಿಸಲಾಗುವುದು) ಹಣವನ್ನು ನಗದಾಗಿ ಜಿಲ್ಲಾ ಪೊಲೀಸು ಕಛೇರಿಯಲ್ಲಿ ಪಾವತಿ ಮಾಡುವುದು ಮತ್ತು ವಾಹನವನ್ನು ಸ್ವಂತ ವೆಚ್ಚದಿಂದ ತೆಗೆದುಕೊಂಡು ಹೋಗುವುದು.
7. ಅರ್ನೆಸ್ಟ್ ಮನಿಯನ್ನು ಶೇ.75ರ ಮೊತ್ತಕ್ಕೆ ಹೊಂದಾಣಿಕೆ ಮಾಡಲಾಗುವುದಿಲ್ಲ. ಯಶಸ್ವಿದಾರರು ಎಲ್ಲಾ ನಿಬಂಧನೆ ಹಾಗೂ ಷರತ್ತುಗಳನ್ನು ಪೂರ್ಣಗೊಳಿಸಿ ವಾಹನವನ್ನು ತಮ್ಮ ವಶಕ್ಕೆ ಪಡೆದ ನಂತರ ಈ ಮೊತ್ತವನ್ನು ಕಛೇರಿಯ ಲೆಕ್ಕ ಶಾಖೆಯಿಂದ ವಾಪಾಸು ನೀಡಲಾಗುವುದು.
8. ಯಶಸ್ವಿದಾರರು ನಿಗದಿತ ಅವಧಿಯಲ್ಲಿ ಹಣವನ್ನು ಪಾವತಿ ಮಾಡದಿದ್ದಲ್ಲಿ ಅಥವಾ ಈ ಇಲಾಖೆಗೆ ಯಾವುದೇ ರೀತಿಯ ನಷ್ಟ ಉಂಟುಮಾಡಿದಲ್ಲಿ ನಷ್ಟದ ಮೊತ್ತವನ್ನು ಇಎಂಡಿ ಹಾಗೂ ಶೇ.25 ಪಾವತಿಸಲಾದ ಮೊತ್ತದಲ್ಲಿ ವಸೂಲಿ ಮಾಡಲಾಗುವುದು ಅಥವಾ ಡಿಪಾಸಿಟ್ ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಕಾನೂನಿನ ಕ್ರಮ ಜರುಗಿಸಲಾಗುವುದು.
9. ಪೊಲೀಸು ಅಧೀಕ್ಷಕರು, ಉಡುಪಿ ಜಿಲ್ಲೆ, ಉಡುಪಿ ರವರು ಯಾವುದೇ ಕಾರಣವನ್ನು ನೀಡದೇ ಟೆಂಡರು ಕಂ ಹರಾಜನ್ನು ಮುಂದೂಡುವ ಅಥವಾ ರದ್ದುಪಡಿಸುವ ಹಕ್ಕನ್ನು ಹೊಂದಿರುತ್ತಾರೆ.
10. ಈ ಮೋಟಾರು ವಾಹನದ ಮಾರಾಟದ ಒಪ್ಪಂದದಲ್ಲಿ ಯಾವುದೇ ವಿವಾದ ಉಂಟಾದಲ್ಲಿ ಮಹಾ ನಿರ್ದೇಶಕರು ಮತ್ತು ಪೊಲೀಸು ಮಹಾ ನಿರೀಕ್ಷಕರು, ಕರ್ನಾಟಕ ರಾಜ್ಯ, ಬೆಂಗಳೂರು ರವರ ನಿರ್ಣಯ ಅಂತಿಮವಾಗಿದೆ.
11. ಈ ಸಂಬಂಧದಲ್ಲಿ ಹೆಚ್ಚಿನ ಮಾಹಿತಿಯನ್ನು ಪೊಲೀಸು ಅಧೀಕ್ಷಕರು, ಉಡುಪಿ ಜಿಲ್ಲೆ, ಉಡುಪಿ ರವರ ಕಛೇರಿಯಿಂದ ಪಡೆಯಬಹುದಾಗಿದೆ.

ಪಿ.ಆರ್. 16 ಪೊಲೀಸು ಅಧೀಕ್ಷಕರು, ಉಡುಪಿ ಜಿಲ್ಲೆ, ಉಡುಪಿ.

**ಕಾರ್ಯನಿರ್ವಾಹಕ ಅಭಿಯಂತರರು, ಲೋ. ಇಲಾಖೆ, ವಿಭಾಗ, ವಿಜಾಪೂರ**

**ದ್ವಿಲಕೋಟೆ ಪದ್ಧತಿ**

**ಟೆಂಡರ್ ಪ್ರಕಟಣೆ ಸಂಖ್ಯೆ: ಲೋ.ಇ./ವಿ.ವಿ./ಬಿಜೆ/ಸ.ಇಂ./ನಬಾರ್ಡ್.10/2004-05/3127, ದಿನಾಂಕ: 27ನೇ ಡಿಸೆಂಬರ್ 2004**

ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಗುತ್ತಿಗೆದಾರರಿಂದ ಈ ಕೆಳಕಂಡ ಕಾಮಗಾರಿಗಳಿಗೆ ಐಟಂವಾರು ಟೆಂಡರ್‌ಗಳನ್ನು ದ್ವಿಲಕೋಟೆ ಪದ್ಧತಿಯಲ್ಲಿ ದ್ವಿ ಪ್ರತಿಗಳಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ-2000 ಮತ್ತು ಆ್ಯಕ್ಟ್-2000 ಪ್ರಕಾರ ಕರ್ನಾಟಕ ರಾಜ್ಯ ಸರ್ಕಾರದ ರಾಜ್ಯಪಾಲರ ಪರವಾಗಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳಿಂದ ಆಹ್ವಾನಿಸಲಾಗಿದೆ.

1) ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ: 28.01.2005 ಸಂಜೆ 5.30 ಗಂಟೆಯ ವರೆಗೆ
2) ಖುಲ್ಲಾ ಟೆಂಡರ್ ಫಾರಂಗಳನ್ನು ವಿತರಿಸುವ ದಿನಾಂಕ: 31.01.2005 ಸಂಜೆ 5.30 ಗಂಟೆಯ ವರೆಗೆ
3) ತುಂಬಿದ ಮೊಹರ ಬಂದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: 3.02.2005 ಸಂಜೆ 4.00 ಗಂಟೆಯ ವರೆಗೆ

ಕಾಮಗಾರಿಯ ಟೆಂಡರ್ 2 ಲಕೋಟೆಗಳನ್ನು ಅಂದರೆ 1) ತಾಂತ್ರಿಕ ಬಿಡ್ ಮತ್ತು 2) ಆರ್ಥಿಕ ಬಿಡ್‌ಗಳನ್ನು ಒಳಗೊಂಡಿರುತ್ತದೆ.

1) ಗುತ್ತಿಗೆದಾರರು ತಾಂತ್ರಿಕ ಬಿಡ್‌ನ್ನು ದ್ವಿಪ್ರತಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಅವಶ್ಯಕ ದೃಢೀಕೃತ ದಾಖಲಾತಿಗಳನ್ನು ಲಗತ್ತಿಸಿ ಲಕೋಟೆಯಲ್ಲಿ ಮೊಹರು ಮಾಡಿ ಲಕೋಟೆಯ ಮೇಲೆ ತಾಂತ್ರಿಕ ಬಿಡ್ ಎಂದು ನಮೂದಿಸಿ ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.

2) ಗುತ್ತಿಗೆದಾರರು ಆರ್ಥಿಕ ಬಿಡ್‌ನ್ನು ದ್ವಿಪ್ರತಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಶೆಡ್ಯೂಲ್ 'ಬಿ' ನಲ್ಲಿ ದರಗಳನ್ನು ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಲಕೋಟೆಯಲ್ಲಿ ಮೊಹರು ಮಾಡಿ ಲಕೋಟೆಯ ಮೇಲೆ ಆರ್ಥಿಕ ಬಿಡ್ ಎಂದು ನಮೂದಿಸಿ ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.

ಮೇಲ್ಕಂಡ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ಎರಡನ್ನೂ ಇನ್ನೊಂದು ಲಕೋಟೆಯಲ್ಲಿ ಹಾಕಿ ಕಾಮಗಾರಿಯ ಹೆಸರು ಹಾಗೂ ಗುತ್ತಿಗೆದಾರರ ಪೂರ್ಣ ವಿಳಾಸ ನಮೂದಿಸಿ ಮೊಹರು ಮಾಡಿರುವ ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿದವರಿಂದ ಏಕಕಾಲಕ್ಕೆ ಅಧೀಕ್ಷಕ ಅಭಿಯಂತರರು ಲೋಕೋಪಯೋಗಿ ಇಲಾಖೆ, ಬೆಳಗಾಂವ ವೃತ್ತ, ಬೆಳಗಾಂವ ಇವರ ಕಾರ್ಯಾಲಯದಲ್ಲಿ ಮತ್ತು ಕಾರ್ಯಪಾಲಕ ಇಂಜಿನೀಯರ್, ಲೋಕೋಪಯೋಗಿ ವಿಭಾಗ, ವಿಜಾಪೂರ ಇವರ ಕಾರ್ಯಾಲಯದಲ್ಲಿ ಈ ಮೇಲೆ ನಮೂದಿಸಿರುವ ದಿನಾಂಕದಂದು ಸ್ವೀಕರಿಸಲಾಗುವುದು.

ತಾಂತ್ರಿಕ ಬಿಡ್‌ನ್ನು ದಿನಾಂಕ: 4.02.2005 ರಂದು ಮೊದಲು ತೆರೆಯಲಾಗುವುದು. ತೃಪ್ತಿಕರವಾದ ವಿವರಗಳನ್ನು ಸಲ್ಲಿಸಿದ ಗುತ್ತಿಗೆದಾರರ ತಾಂತ್ರಿಕ ಬಿಡ್‌ಗಳನ್ನು ಸಕ್ರಮ ಪ್ರಾಧಿಕಾರದಿಂದ ಅನುಮೋದನೆಯಾದ ನಂತರ ಅರ್ಹರಾದ ಗುತ್ತಿಗೆದಾರರ ಆರ್ಥಿಕ ಬಿಡ್‌ಗಳನ್ನು ಮಾತ್ರ ಹಾಜರಿರುವ ಗುತ್ತಿಗೆದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಈ ವಿಷಯದಲ್ಲಿ ಸಕ್ಷಮ ಅಧಿಕಾರಿಗಳ ನಿರ್ಧಾರವು ಅಂತಿಮವಾಗಿರುತ್ತದೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗೆ ಇಟ್ಟಿರುವ ಹಣ ರೂ. ಲಕ್ಷಗಳಲ್ಲಿ | ಮುಂಗಡ ಠೇವಣಿ ಹಣ ರೂ. ಗಳಲ್ಲಿ | ಟೆಂಡರು ಫಾರಂಗಳ ಬೆಲೆ ತೆರಿಗೆ ಸಹಿತ ರೂ. | ಗುತ್ತಿಗೆ ದಾರರ ದರ್ಜೆ | ಕಾಮಗಾರಿಯನ್ನು ಪೂರ್ಣಗೊಳಿಸಲು ನಿಗದಿಪಡಿಸಿರುವ ಅವಧಿ ಮಳೆಗಾಲ ಸೇರಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| | **ನಬಾರ್ಡ್ ಆರ್.ಆಯ್.ಡಿ.ಎಫ್. 10ರ ಅಡಿಯಲ್ಲಿ ಕಾಮಗಾರಿಗಳು** | | | | | |
| 1 | ವಿಜಾಪೂರ ತಾಲ್ಲೂಕಿನ ಕನಮಡಿ-ಕೊಟ್ಟಲಗಿ ರಸ್ತೆ ಸುಧಾರಣೆ ಮಾಡುವುದು | 53.00 | 53000/- | 5500/- | 1ನೇ ದರ್ಜೆ | 9 ತಿಂಗಳು |
| 2 | ಇಂಡಿ ತಾಲ್ಲೂಕಿನ ಇಂಡಿ-ಹಂಜಗಿ-ನಿಂಬಾಳ ರಸ್ತೆ ಸುಧಾರಣೆ ಮಾಡುವುದು. | 75.00 | 75000/- | 5500/- | 1ನೇ ದರ್ಜೆ | 9 ತಿಂಗಳು |
| 3 | ಇಂಡಿ ತಾಲ್ಲೂಕಿನ ಇಂಡಿ ರೈಲ್ವೆ ಸ್ಟೇಷನ್‌ದಿಂದ ಅಹೇರಸಂಗ ಲಚ್ಯಾಣ ರಸ್ತೆ ಸುಧಾರಣೆ ಮಾಡುವುದು. | 70.00 | 70000/- | 5500/- | 1ನೇ ದರ್ಜೆ | 9 ತಿಂಗಳು |
| 4 | ವಿಜಾಪೂರ ತಾಲ್ಲೂಕಿನ ಯಕ್ಕುಂಡಿ ನಿಡೋಣಿ-ದನ್ಯಾಳ ತಾಜಪೂರ ರಸ್ತೆಯಿಂದ ರಾಜ್ಯ ಹೆದ್ದಾರಿ 12ಕ್ಕೆ ಕೂಡು ರಸ್ತೆ ಸುಧಾರಣೆ ಮಾಡುವುದು. | 70.00 | 70,000/- | 5500/- | 1ನೇ ದರ್ಜೆ | 9 ತಿಂಗಳು |
| 5 | ವಿಜಾಪೂರ ತಾಲ್ಲೂಕಿನ ಜಾಲಗೇರಿ-ಟಕ್ಕಳಕಿ ಕಳ್ಳಕವಟಗಿ-ಬಾಬಾನಗರ ರಸ್ತೆ ಸುಧಾರಣೆ ಮಾಡುವುದು (1ನೇ ಹಂತ) | 50.00 | 50,000/- | 3300/- | 1ನೇ ದರ್ಜೆ | 6 ತಿಂಗಳು |
| 6 | ಬ. ಬಾಗೇವಾಡಿ ತಾಲ್ಲೂಕಿನ ಮುಳವಾಡ ಮನಗೂಳಿ ಉಕ್ಕಲಿ ರಸ್ತೆ ಸುಧಾರಣೆ ಮಾಡುವುದು | 90.00 | 90,000/ | 5500/- | 1ನೇ ದರ್ಜೆ | 12 ತಿಂಗಳು |
| 7 | ಬ.ಬಾಗೇವಾಡಿ ತಾಲ್ಲೂಕಿನ ಮುಳವಾಡ ಆಲಮಟ್ಟಿ ರಸ್ತೆ ಸುಧಾರಣೆ ಮಾಡುವುದು. | 60.00 | 60,000/- | 5500/- | 1ನೇ ದರ್ಜೆ | 9 ತಿಂಗಳು |
| 8 | ಬ.ಬಾಗೇವಾಡಿ ತಾಲ್ಲೂಕಿನ ತೆಲಗಿ ಕ್ರಾಸ್‌ದಿಂದ ವಂದಾಲ ರಸ್ತೆ ಸುಧಾರಣೆ ಮಾಡುವುದು. | 95.00 | 95,000/- | 5500/- | 1ನೇ ದರ್ಜೆ | 12 ತಿಂಗಳು |
| 9 | ಸಿಂಧಗಿ ತಾಲ್ಲೂಕಿನ ಕಲಕೇರಿ ಬಿಂಜಲಬಾವಿ ರಸ್ತೆ ಸುಧಾರಣೆ ಮಾಡುವುದು. | 70.00 | 70,000/- | 5500/- | 1ನೇ ದರ್ಜೆ | 9 ತಿಂಗಳು |
| 10 | ಮುದ್ದೇಬಿಹಾಳ ತಾಲ್ಲೂಕಿನ ನಾಲತವಾಡ ಮೂಕಿಹಾಳ ರಸ್ತೆ ಸುಧಾರಣೆ ಮಾಡುವುದು. | 180.00 | 1,80,000/- | 5500/- | 1ನೇ ದರ್ಜೆ | 18 ತಿಂಗಳು |

**ನಿಬಂಧನೆಗಳು:**

1. ಗುತ್ತಿಗೆದಾರರ ಇಂಥಹದೇಯಾದ ಕಾಮಗಾರಿಗಳನ್ನು ಪ್ರತಿ ಟೆಂಡರಿಗಿಟ್ಟ ಮೊತ್ತದ ಶೇಕಡ 30 ಮೊತ್ತದ ಕಾಮಗಾರಿಗಳನ್ನು ಹಿಂದಿನ 5 ಆರ್ಥಿಕ ವರ್ಷಗಳಲ್ಲಿ ಯಾವುದಾದರೂ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರ್ಣಗೊಳಿಸಿರಬೇಕು. (ಕಾಮಗಾರಿ ಮೊತ್ತವನ್ನು ಕಾಮಗಾರಿ ಪೂರ್ತಿಗೊಂಡ ಆರ್ಥಿಕ ವರ್ಷದಿಂದ ಈ ವರ್ಷದವರೆಗೆ ಶೇಕಡಾ 10 ರಂತೆ ಪ್ರತಿ ವರ್ಷಕ್ಕೆ ಲೆಕ್ಕ ಹಾಕುವುದು, ಅಲ್ಲದೆ ಪ್ರಸಕ್ತ ಆರ್ಥಿಕ ವರ್ಷದಲ್ಲಿ ಕಾಮಗಾರಿಯನ್ನು ಕೈಗೊಂಡಿದ್ದರೆ ಟೆಂಡರಿಗಿಟ್ಟ ಮೊತ್ತದ ಶೇಕಡಾ 30 ಹಣ ಪಾವತಿಯಾಗಿರಬೇಕು) ಸದರಿ ಪ್ರಮಾಣ ಪತ್ರವನ್ನು ಕಾರ್ಯನಿರ್ವಾಹಕ ಅಭಿಯಂತರವರ ಅಥವಾ ಮೇಲ್ಪಟ್ಟು ಅಧಿಕಾರಿಗಳಿಂದ ಇಲ್ಲವೇ ನೋಟರಿಯವರಿಂದ ದೃಢೀಕರಿಸಿ ಅರ್ಜಿಯೊಂದಿಗೆ ಸಲ್ಲಿಸುವುದು.
2. ಮೇಲೆ ನಮೂದಿಸಿದ ಕೆಲಸದ ಟೆಂಡರ್‌ಗಳಲ್ಲಿ ಭಾಗವಹಿಸಲಿಚ್ಛಿಸುವ ಗುತ್ತಿಗೆದಾರರು ನಿಗದಿತ ಟೆಂಡರ್ ಫಾರಂ ಬೆಲೆಯನ್ನು ಕಾರ್ಯನಿರ್ವಾಹಕ ಅಭಿಯಂತರರು ಲೋ.ಇ.ವಿಭಾಗ, ವಿಜಾಪೂರ ಇವರ ಹೆಸರಿನಲ್ಲಿ ಹಣ ಪಾವತಿಯಾಗುವಂತೆ ಡಿಮಾಂಡ್ ಡ್ರಾಫ್ಟನ್ನು ಪಡೆದು ಅರ್ಜಿಯ ಜೊತೆಯಲ್ಲಿ ಲಗತ್ತಿಸಿ, ಗುತ್ತಿಗೆ ನೋಂದಣೆ ಪ್ರತಿಯನ್ನು ನಿಗದಿತ ದಿನಾಂಕದಂದು ಸಲ್ಲಿಸುವುದು.
3. ಖಾಲಿ ಟೆಂಡರ್ ಫಾರಂ ವಿತರಿಸುವಾಗ ಗುತ್ತಿಗೆದಾರರ ನೋಂದಣೆ ಪುಸ್ತಕವನ್ನು ಕಡ್ಡಾಯವಾಗಿ ಹಾಜರುಪಡಿಸಿ ಅದರಲ್ಲಿ ಕಾಮಗಾರಿಗಳ ವಿವರಗಳನ್ನು ದಾಖಲಿಸಿಕೊಳ್ಳತಕ್ಕದ್ದು. ಕಾಮಗಾರಿಯ ವಿವರಗಳನ್ನು ದಾಖಲಿಸುವುದು.
4. ಸತತವಾಗಿ 3 ಬಾರಿ ಖಾಲಿ ಟೆಂಡರ್ ಫಾರಂ ಖರೀದಿಸಿ ಟೆಂಡರ್ ಹಾಕದೇ ಇರುವ ಗುತ್ತಿಗೆದಾರರು ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.
5. ಗುತ್ತಿಗೆದಾರರು ರಸ್ತೆ ಕಾಮಗಾರಿಗೆ ಈ ಕೆಳಕಂಡ ಯಂತ್ರೋಪಕರಣಗಳ ಮಾಲೀಕತ್ವ ಹೊಂದಿರಬೇಕು ಅಥವಾ ಬಾಡಿಗೆ ಆಧಾರದಲ್ಲಿ ತರುವವರು ಮಾಲೀಕರಿಂದ 1972ರ ಹೈರ್ ಪರ್ಚೇಸ್ ಆಕ್ಟ್‌ನಂತೆ ಸೂಕ್ತ ಬಾಡಿಗೆ ಕರಾರು ಪತ್ರವನ್ನು ಎಲ್ಲಾ ಅವಶ್ಯಕ ದಾಖಲಾತಿಗಳೊಂದಿಗೆ ಹಾಗೂ ಮಾಲೀಕರು ಸದರಿ ಯಂತ್ರೋಪಕರಣಗಳನ್ನು ಸ್ವತಃ ಹೊಂದಿರುವ ಬಗ್ಗೆ ಅಗತ್ಯ ದಾಖಲಾತಿಗಳನ್ನು ಹಾಗೂ ಯಾವುದೇ ಸಂಸ್ಥೆಯಿಂದ ಆರ್ಥಿಕ ನೆರವು ಪಡೆದು ಖರೀದಿಸಿದ್ದಲ್ಲಿ, ಆ ಸಂಸ್ಥೆಗೆ ಸದರಿ ಯಂತ್ರೋಪಕರಣಗಳನ್ನು ಅಡವು ಇಟ್ಟಿದ್ದಲ್ಲಿ ಆ

ಸಂಸ್ಥೆಯಿಂದ ಸೂಕ್ತ ಮುಚ್ಚಳಿಕೆ ಪತ್ರ ಪಡೆದು ಈ ಎಲ್ಲಾ ದಾಖಲಾತಿಗಳನ್ನು ತಾಂತ್ರಿಕ ಬಿಡ್‌ನೊಂದಿಗೆ ಸಲ್ಲಿಸತಕ್ಕದ್ದು. ಹಾಟ್ ಮಿಕ್ಸ್‌ಪ್ಲಾಂಟ್ ಸ್ಥಾಪಿಸಿರುವ ಸ್ಥಾವರದ ಸ್ಥಳವನ್ನು ತಪ್ಪದೇ ತಾಂತ್ರಿಕ ಬಿಡ್ ನೊಂದಿಗೆ ನಮೂದಿಸತಕ್ಕದ್ದು.

1) 20/30 ಟಿ.ಪಿ.ಹೆಚ್, ಅಥವಾ ಹೆಚ್ಚಿನ ಸಾಮರ್ಥ್ಯದ ಹಾಟ್ ಮಿಕ್ಸ್ ಪ್ಲಾಂಟ್ 1 ನಂ.
2) ಮೆಕ್ಯಾನಿಕಲ್ ಪೇವರ್ ಫಿನಿಷರ್ 1 ನಂ.
3) ಸ್ಟ್ಯಾಟಿಕ್ ರೋಡ್ ರೋಲರ್ (8/10 ಟನ್ ಸಾಮರ್ಥ್ಯದ) 2 ನಂ.
4) ಮೆಕ್ಯಾನಿಕಲ್ ಸ್ಪ್ರೇಯರ್-1 ನಂ.
5) ಟಿಪ್ಪರ್ಸ್-4 ನಂ.

6. ಕಾಮಗಾರಿಗೆ ಅವಶ್ಯಕವಿರುವ ಎಲ್ಲಾ ಸಾಮಗ್ರಿಗಳನ್ನು ಗುತ್ತಿಗೆದಾರರೇ ಒದಗಿಸಿಕೊಳ್ಳತಕ್ಕದ್ದು ಮತ್ತು ಇಲಾಖಾವತಿಯಿಂದ ಯಾವುದೇ ಸಾಮಗ್ರಿಗಳನ್ನು ನೀಡಲಾಗುವುದಿಲ್ಲ.
7. ಗುತ್ತಿಗೆದಾರರು ನಿರ್ವಹಿಸಿದ ಕಾಮಗಾರಿಯನ್ನು ಒಂದು ವರ್ಷದವರೆಗೂ ಅವರ ವೆಚ್ಚದಲ್ಲಿ ಸುಸ್ಥಿತಿಯಲ್ಲಿ ಕಾಪಾಡತಕ್ಕದ್ದು.
8. ಟೆಂಡರ್ ಜೊತೆಯಲ್ಲಿ ಮುಂಗಡ ಠೇವಣಿ (ಇ.ಎಂ.ಡಿ.) ಯನ್ನು ಶೆಡ್ಯೂಲ್ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್/ಡಿಪಾಜಿಟ್ ಕಾಲ್ ರಿಸೀಪ್ಟ್/ ಬ್ಯಾಂಕ್ ಗ್ಯಾರಂಟಿ ಅಥವಾ ಕಾರ್ಯಪಾಲಕ ಅಭಿಯಂತರರು, ಪಿಡಬ್ಲ್ಯೂಡಿ ವಿಭಾಗ, ವಿಜಾಪೂರ ಇವರ ಹೆಸರಿನಲ್ಲಿ ಪ್ಲೆಡ್ಜ್ ಮಾಡಿದ ರಾಷ್ಟ್ರೀಯ ಉಳಿತಾಯ ಪತ್ರಗಳ ರೂಪದಲ್ಲಿ ಸಲ್ಲಿಸುವುದು. ಪ್ಲೆಡ್ಜ್ ಮಾಡದೇ ಇದ್ದ ಗುತ್ತಿಗೆಯನ್ನು ತಿರಸ್ಕರಿಸಲಾಗುವುದು. ಇ.ಎಂ.ಡಿ.ಗಳ ವ್ಯಾಲಿಡಿಟಿ ಅವಧಿ 90 ದಿನಗಳು.
9. ಅ.ನಂ.5ರ ಕಾಮಗಾರಿಗೆ ತಾಂತ್ರಿಕ ಬಿಡ್ ಅನ್ವಯಿಸುವುದಿಲ್ಲ.
10. ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೆ ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಲೋಕೋಪಯೋಗಿ ಇಲಾಖೆಗೆ ಸಂಬಂಧಿಸಿದ ಅಧಿಕಾರಿಗಳು ಕಾಯ್ದಿರಿಸಿಕೊಂಡಿದ್ದಾರೆ.

**ಟಿಪ್ಪಣಿ:** ಮೇಲೆ ನಮೂದಿಸಿದ ದಿನಾಂಕಗಳು ಸಾರ್ವತ್ರಿಕ ರಜಾ ದಿನವೆಂದು ಘೋಷಿಸಿದ್ದಲ್ಲಿ ಮುಂದಿನ ಕೆಲಸದ ದಿನವನ್ನು ಪರಿಗಣಿಸುವುದು.

ಪಿ.ಆರ್. 17 ಕಾರ್ಯನಿರ್ವಾಹಕ ಅಭಿಯಂತರು, ಲೋ.ಇ.ವಿಭಾಗ, ವಿಜಾಪೂರ.

**DIRECTORATE OF PORTS & I.W.T. KARWAR**
**Office of the Marine Engineer, Baithkol-Karwar-581302**
**TENDER NOTIFICATION FOR PROCUREMENT OF ONE NO. PILOT LAUNCH AND A DREDGER UNIT**
**No.GNL/CR-35/36/03-04, Dated: 31st December 2004**

Sealed tenders in the prescribed form are separately invited in single stage, under two cover system for Design, construction, supply and delivery afloat at Karwar port, 1 No. PILOT LAUNCH and A DREDGING UNIT Consisting of 1 No. DUMB DREDGER, 2 Nos. DUMB HOPPER BARGES, 1 No. Self propelled Mooring TUG, 1 No. FRP OAR DINGHY.

| Sl. No. | Name of the work | Cost of Tender form non refundable | Period of Contract | E.M.D. In Rupees | Date of Issue of Tender Forms | Date of Submission of Tender Form |
|---|---|---|---|---|---|---|
| 1 | 1 No. PILOT LAUNCH | Rs.2000/- + S.T. 4% | 6 months | 2.00 lakhs | 17.1.05 to 04.2.05 | 18.2.05 at 14.30 HRs. |
| 2 | Dredging unit | Rs.5000/- + S.T. 4% | 9 months | 5.00 lakhs | -do- | -do- |

The intending tenderer should have proven track record of designing, building and supplying of floating vessels and should have executed similar works and should be an i.s.o. 9002 certified Company or in the process of obtaining i.s.o. certification, the proof of which should be furnished along with tender form. Tender documents in duplicate will be available at the Office of the Marine Engineer, Karwar, on payment of specified Tender fee in the form of Bank demand draft drawn in favour of Marine Engineer, Karwar, payable at Karwar.

The pre-bid discussion will be held in the Office of the Marine Engineer on 11.2.05 at 10 A.M.

PR - 13 MARINE ENGINEER, KARWAR.

**ಅರಣ್ಯ ಇಲಾಖೆ**
**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ವನ್ಯಜೀವಿ ವಿಭಾಗ, ಶಿವಮೊಗ್ಗ**
**ಸಂಕ್ಷಿಪ್ತ ಟೆಂಡರ್ ಪ್ರಕಟಣೆ**
**ಸಂಖ್ಯೆ: ಎಸಿಟಿ:ಆಆ:ಸಿಆರ್-16/2004-05, ದಿನಾಂಕ: 7ನೇ ಜನವರಿ 2005**

ಶಿವಮೊಗ್ಗ ವನ್ಯಜೀವಿ ವಿಭಾಗಕ್ಕೆ ಒಳಪಡುವ ಸಕ್ರೆಬೈಲು ಇಲಾಖೆ ಆನೆ ಬಿಡಾರದಲ್ಲಿ ಪೋಷಿಸಲ್ಪಡುತ್ತಿರುವ ಇಲಾಖಾ ಆನೆಗಳಿಗೆ 2005-2006ನೇ ಸಾಲಿಗೆ ಈ ಕೆಳಗಿನ ಅನುಸೂಚಿಯಲ್ಲಿ ನಮೂದಿಸಲ್ಪಟ್ಟಿರುವ ಅಂದಾಜು ಪ್ರಮಾಣದ ಉತ್ತಮ ಗುಣಮಟ್ಟದ ಆಹಾರ ಪದಾರ್ಥಗಳನ್ನು, ಪ್ರತಿದಿನ ಅಗತ್ಯಕ್ಕೆ ಅನುಗುಣವಾಗಿ ಒದಗಿಸುವ ಕೆಲಸಕ್ಕಾಗಿ ಈ ವಿಭಾಗದ ನೋಂದಾಯಿತ ಗುತ್ತಿಗೆದಾರರಿಂದ ಟೆಂಡರ್‌ಗಳನ್ನು ದಿನಾಂಕ: 15.02.2005 ರಂದು 3.00 ಘಂಟೆಯವರೆಗೆ ಸ್ವೀಕರಿಸಿ, ಸಾಧ್ಯವಾದರೆ ಅದೇ ದಿನ 4.00 ಘಂಟೆಯ ನಂತರ ತೆರೆಯಲಾಗುವುದು.

**ಅನುಸೂಚಿ**

**ಸಕ್ರೆಬೈಲು ಆನೆಗಳ ಕ್ಯಾಂಪಿನ ಆನೆಗಳಿಗೆ ಮೇವು ಆಹಾರ ಸರಬರಾಜು**

| ಕ್ರ. ಸಂ. | ಆಹಾರ ಪದಾರ್ಥದ ವಿವರ | ಅಂದಾಜು ಪ್ರಮಾಣ | ಒಟ್ಟು ಅಂದಾಜು ಮೊತ್ತ (ರೂ.ಗಳು) | ಮುಂಗಡ ಠೇವಣಿ ಇ.ಎಂ.ಡಿ. (ರೂ.ಗಳು) |
|---|---|---|---|---|
| 1 | ದಪ್ಪ ಭತ್ತ (ಜಯ ಅಥವಾ 1001 ತಳಿ) | 26085.00 ಕೆ.ಜಿ. | 791200.00 | 39600.00 |
| 2 | ಭತ್ತದ ಹುಲ್ಲು. | 56295.00 ಕೆ.ಜಿ. | | |
| 3 | ಬಲಿತ ತೆಂಗಿನಕಾಯಿ (ಕನಿಷ್ಟ 500 ಗ್ರಾಂ ತೂಕ) | 11315 ಸಂಖ್ಯೆ | | |
| 4 | ದಪ್ಪ ಅಕ್ಕಿ. (ಜಯ ಅಥವಾ 1001 ತಳಿ) | 22860.00 ಕೆ.ಜಿ. | | |
| 5 | ಬೆಲ್ಲ (ಉಂಡೆ) | 1624.00 ಕೆ.ಜಿ. | | |
| 6 | ಉಪ್ಪು. (ಹರಳು) | 967.00 ಕೆ.ಜಿ. | | |
| 7 | ಕಬ್ಬು (ಬಲಿತದ್ದು) | 2000.00 ಕೆ.ಜಿ. | | |
| 8 | ಹರಳೆಣ್ಣೆ | 1314.00 ಲೀ. | | |

**ಷರತ್ತುಗಳು:**

1. ಟೆಂಡರ್ ಫಾರಂಗಳನ್ನು ದಿನಾಂಕ: 14.02.2005ರ ಬೆಳಿಗ್ಗೆ 10.00 ಗಂಟೆಯಿಂದ 15.02.2005ರ ಮಧ್ಯಾಹ್ನ 1.30 ಗಂಟೆಯವರೆಗೆ ಕಛೇರಿ ವೇಳೆಯಲ್ಲಿ ಅನುಸೂಚಿಯಲ್ಲಿ ತಿಳಿಸಿರುವ ಆಹಾರ ಸರಬರಾಜಿಗೆ ಟೆಂಡರ್ ಫಾರಂ ಶುಲ್ಕವನ್ನು 1000/- (ಒಂದು ಸಾವಿರ ರೂಪಾಯಿ ಮಾತ್ರ) (ಶಾಸನ ಬದ್ದ ತೆರಿಗೆಗಳನ್ನು ಒಳಗೊಂಡ) ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳ ಹೆಸರಿನಲ್ಲಿ ಶಿವಮೊಗ್ಗದಲ್ಲಿ ಪಾವತಿಯಾಗುವಂತೆ ಯಾವುದೇ ರಾಷ್ಟ್ರೀಕೃತ / ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಡಿ.ಡಿ. ಮೂಲಕ ಕಛೇರಿ ವೇಳೆಯಲ್ಲಿ ಪಾವತಿಸಿ (ಹಿಂತಿರುಗಿಸಲಾಗುವುದಿಲ್ಲ) ಟೆಂಡರ್ ಫಾರಂಗಳನ್ನು ಪಡೆಯಬಹುದಾಗಿದೆ.
2. ಪ್ರತಿಯೊಂದು ಘಟಕದ ಆಹಾರ ಸರಬರಾಜಿಗೆ ಪ್ರತ್ಯೇಕ ಟೆಂಡರ್ ಫಾರಂಗಳನ್ನು ನಿಗದಿತ ಇ.ಎಂ.ಡಿ. ಮತ್ತಿತರೆ ದಾಖಲೆಗಳೊಂದಿಗೆ ಹಾಕತಕ್ಕದ್ದು.
3. ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ನಿರಾಕರಿಸಲಾಗುವುದು. ಯಾವುದೇ ಕಾರಣ ನೀಡದೇ ಟೆಂಡರನ್ನು ನಿರಾಕರಿಸುವ ಅಧಿಕಾರವನ್ನು ಈ ಕೆಳ ಸಹಿದಾರರು ಕಾಯ್ದಿರಿಸಿಕೊಂಡಿರುತ್ತಾರೆ.
4. ಟೆಂಡರ್ ನಿಗದಿಪಡಿಸಿದ ದಿನಾಂಕದಂದು ಯಾವುದೇ ರಜಾ ದಿನವಾಗಿದ್ದಲ್ಲಿ, ಆ ದಿನವನ್ನು ಮಾರನೆಯ ಕೆಲಸದ ದಿನ ಎಂದು ತಿಳಿಯತಕ್ಕದ್ದು.
5. ಇನ್ನೂ ಹೆಚ್ಚಿನ ವಿವರಗಳಿಗೆ ಈ ಕೆಳ ಸಹಿದಾರರ ಕಛೇರಿಯ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.

ಪಿ.ಆರ್. 22 ಉಪ ಅರಣ್ಯ ಸಂರಕ್ಷಣಾಧಿಕಾರಿ, ವನ್ಯಜೀವಿ ವಿಭಾಗ, ಶಿವಮೊಗ್ಗ.

**ಕರ್ನಾಟಕ ಮೃಗಾಲಯ ಪ್ರಾಧಿಕಾರ**

**ಕಾರ್ಯನಿರ್ವಾಹಕ ನಿರ್ದೇಶಕರು, ಹುಲಿ-ಸಿಂಹಧಾಮ, ತ್ಯಾವರೆಕೊಪ್ಪ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ವನ್ಯಜೀವಿ ವಿಭಾಗ, ಶಿವಮೊಗ್ಗ**

**ಸಂಕ್ಷಿಪ್ತ ಟೆಂಡರ್ ಪ್ರಕಟಣೆ**

**ಸಂಖ್ಯೆ: ಎಸಿಟಿ:ಹುಸಿಧಾಆ:ಸಿಆರ್-14/2004-05, ದಿನಾಂಕ: 7ನೇ ಜನವರಿ 2005**

ಶಿವಮೊಗ್ಗ ವನ್ಯಜೀವಿ ವಿಭಾಗ ವ್ಯಾಪ್ತಿಯ ಕರ್ನಾಟಕ ಮೃಗಾಲಯ ಪ್ರಾಧಿಕಾರಕ್ಕೆ ಒಳಪಡುವ ಹುಲಿ-ಸಿಂಹಧಾಮ, ತ್ಯಾವರೆಕೊಪ್ಪದಲ್ಲಿ ಪೋಷಿಸಲ್ಪಡುತ್ತಿರುವ ಮಾಂಸಾಹಾರಿ ವನ್ಯಪ್ರಾಣಿ ಮತ್ತು ಸಸ್ಯಾಹಾರಿ ವನ್ಯಪ್ರಾಣಿ ಪಕ್ಷಿಗಳಿಗೆ 2005-2006ನೇ ಸಾಲಿಗೆ ಈ ಕೆಳಗಿನ ಅನುಸೂಚಿಯಲ್ಲಿ ನಮೂದಿಸಲ್ಪಟ್ಟಿರುವ ಅಂದಾಜು ಪ್ರಮಾಣದ ಉತ್ತಮ ಗುಣಮಟ್ಟದ ಮಾಂಸಾಹಾರ ಮತ್ತು ಸಸ್ಯಾಹಾರ ಆಹಾರ ಪದಾರ್ಥಗಳನ್ನು, ಪ್ರತಿದಿನದ ಅಗತ್ಯಕ್ಕೆ ಅನುಗುಣವಾಗಿ ಒದಗಿಸುವ ಕೆಲಸಕ್ಕಾಗಿ ಈ ವಿಭಾಗದ ನೋಂದಾಯಿತ ಗುತ್ತಿಗೆದಾರರಿಂದ ಟೆಂಡರ್‌ಗಳನ್ನು ದಿನಾಂಕ 15.02.2005 ರಂದು 3.00 ಗಂಟೆಯವರೆಗೆ ಸ್ವೀಕರಿಸಿ, ಸಾಧ್ಯವಾದರೆ ಅದೇ ದಿನ 4.00 ಘಂಟೆಯ ನಂತರ ತೆರೆಯಲಾಗುವುದು.

**ಅನುಸೂಚಿ**

**ಘಟಕ-1 ಹುಲಿ-ಸಿಂಹಧಾಮ, ತ್ಯಾವರೆಕೊಪ್ಪದ ಸಸ್ಯಾಹಾರಿ ಪ್ರಾಣಿ ಪಕ್ಷಿಗಳಿಗೆ ಆಹಾರ ಸರಬರಾಜು**

| ಕ್ರ. ಸಂ. | ಆಹಾರ ಪದಾರ್ಥದ ವಿವರ | ಅಂದಾಜು ಪ್ರಮಾಣ | ಒಟ್ಟು ಅಂದಾಜು ಮೊತ್ತ (ರೂ.ಗಳು) | ಮುಂಗಡ ಠೇವಣಿ ಇ.ಎಂ.ಡಿ. (ರೂ.ಗಳು) |
|---|---|---|---|---|
| 1 | 2 | 3 | 4 | 5 |
| 1 | ಸೂರ್ಯಕಾಂತಿ ಹಿಂಡಿ | 11205.50 ಕೆ.ಜಿ. | 693500.00 | 34675.00 |
| 2 | ಗೋಧಿ ಬೂಸ | 11250.50 ಕೆ.ಜಿ. | | |
| 3 | ಹುರಳಿನುಚ್ಚು | 11250.50 ಕೆ.ಜಿ. | | |
| 4 | ರಾಗಿ | 235.50 ಕೆ.ಜಿ. | | |
| 5 | ಹೈಬ್ರಿಡ್ ಜೋಳ | 235.50 ಕೆ.ಜಿ. | | |
| 6 | ದಪ್ಪ ಭತ್ತ (ಜಯ ಅಥವಾ 1001 ತಳಿ) | 235.50 ಕೆ.ಜಿ. | | |
| 7 | ದಪ್ಪ ಅಕ್ಕಿ. (ಜಯ ಅಥವಾ 1001 ತಳಿ) | 3156.00 ಕೆ.ಜಿ. | | |
| 8 | ಕಡ್ಲೆಕಾಳು | 182.50 ಕೆ.ಜಿ. | | |
| 9 | ಹೆಸರುಕಾಳು. | 182.50 ಕೆ.ಜಿ. | | |
| 10 | ಹುರಿಗಡಲೆ. | 182.50 ಕೆ.ಜಿ. | | |

| 1 | 2 | 3 | 4 | 5 |
|---|---|---|---|---|
| 11 | ತರಕಾರಿ. (ಕ್ಯಾರೇಟ್, ಬೀಟ್ ರೋಟ್, ಕ್ಯಾಬೇಜ್, ನವಿಲು ಕೋಸು ಮಿಶ್ರ) | 3285.00 ಕೆ.ಜಿ. | 693500.00 | 34675.00 |
| 12 | ನಂದಿನಿ ಹಾಲು. | 2920 ಲೀಟರ್ | | |
| 13 | ಉಪ್ಪು. (ಹರಳು) | 259.00 ಕೆ.ಜಿ. | | |
| 14 | ಪಚ್ಚೆ ಬಾಳೆಹಣ್ಣು (ಕನಿಷ್ಟ 100 ಗ್ರಾಂ. ತೂಕಕ್ಕಿಂತ ಕಡಿಮೆ ಇಲ್ಲದ) | 5475 ಸಂಖ್ಯೆ | | |
| 15 | ಹಸಿರು ಮೇವು | 213525.00 ಕೆ.ಜಿ. | | |

**ಘಟಕ-2 ಹುಲಿ-ಸಿಂಹಧಾಮ, ತ್ಯಾವರೆಕೊಪ್ಪದ ಮಾಂಸಾಹಾರಿ ಪ್ರಾಣಿಗಳಿಗೆ ಆಹಾರ ಸರಬರಾಜು**

| ಕ್ರ. ಸಂ. | ಆಹಾರ ಪದಾರ್ಥದ ವಿವರ | ಅಂದಾಜು ಪ್ರಮಾಣ | ಒಟ್ಟು ಅಂದಾಜು ಮೊತ್ತ (ರೂ.ಗಳು) | ಮುಂಗಡ ಠೇವಣಿ ಇ.ಎಂ.ಡಿ. (ರೂ.ಗಳು) |
|---|---|---|---|---|
| 1 | ದನದ ಮಾಂಸ (ಮೂಳೆ ಸಹಿತ) | 72540 ಕೆ.ಜಿ. | 2250000.00 | 112500.00 |
| 2 | ದನದ ಮಾಂಸ (ಮೂಳೆ ರಹಿತ) | 780 ಕೆ.ಜಿ. | | |
| 3 | ಕೋಳಿ ಮಾಂಸ | 7176 ಕೆ.ಜಿ. | | |
| 4 | ಜೀವಂತ ಕೋಳಿ (ಪ್ರತಿ ಕೋಳಿ ಕನಿಷ್ಟ 1.50 ಕೆ.ಜಿ.) | 156 ಸಂಖ್ಯೆ | | |
| 5 | ಕೋಳಿ ಮೊಟ್ಟೆ | 2000 ಸಂಖ್ಯೆ | | |

**ಷರತ್ತುಗಳು:**

1. ಟೆಂಡರ್ ಫಾರಂಗಳನ್ನು ದಿನಾಂಕ: 14.02.2005ರ ಬೆಳಿಗ್ಗೆ 10.00 ಗಂಟೆಯಿಂದ 15.02.2005ರ ಮಧ್ಯಾಹ್ನ 1.30 ಗಂಟೆಯವರೆಗೆ ಕಛೇರಿ ವೇಳೆಯಲ್ಲಿ ಅನುಸೂಚಿಯಲ್ಲಿ ತಿಳಿಸಿರುವ ವಿವಿಧ ಘಟಕಗಳ ಆಹಾರ ಸರಬರಾಜಿಗೆ ಟೆಂಡರ್ ಫಾರಂ ಶುಲ್ಕ 1000/- (ಒಂದು ಸಾವಿರ ರೂಪಾಯಿ ಮಾತ್ರ) (ಶಾಸನ ಬದ್ದ ತೆರಿಗೆಗಳನ್ನು ಒಳಗೊಂಡ) ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳ ಹೆಸರಿನಲ್ಲಿ ಶಿವಮೊಗ್ಗದಲ್ಲಿ ಪಾವತಿಯಾಗುವಂತೆ ಯಾವುದೇ ರಾಷ್ಟ್ರೀಕೃತ / ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಡಿ.ಡಿ. ಮೂಲಕ ಕಛೇರಿ ವೇಳೆಯಲ್ಲಿ ಪಾವತಿಸಿ (ಹಿಂತಿರುಗಿಸಲಾಗುವುದಿಲ್ಲ) ಟೆಂಡರ್ ಫಾರಂಗಳನ್ನು ಪಡೆಯಬಹುದಾಗಿದೆ.
2. ಪ್ರತಿಯೊಂದು ಘಟಕದ ಆಹಾರ ಸರಬರಾಜಿಗೆ ಪ್ರತ್ಯೇಕ ಟೆಂಡರ್ ಫಾರಂಗಳನ್ನು ನಿಗದಿತ ಇ.ಎಂ.ಡಿ. ಮತ್ತಿತರೆ ದಾಖಲೆಗಳೊಂದಿಗೆ ಹಾಕತಕ್ಕದ್ದು.
3. ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ನಿರಾಕರಿಸಲಾಗುವುದು. ಯಾವುದೇ ಕಾರಣ ನೀಡದೇ ಟೆಂಡರನ್ನು ನಿರಾಕರಿಸುವ ಅಧಿಕಾರವನ್ನು ಈ ಕೆಳ ಸಹಿದಾರರು ಕಾಯ್ದಿರಿಸಿಕೊಂಡಿರುತ್ತಾರೆ.
4. ಟೆಂಡರ್ ನಿಗದಿಪಡಿಸಿದ ದಿನಾಂಕದಂದು ಯಾವುದೇ ರಜಾ ದಿನವಾಗಿದ್ದಲ್ಲಿ, ಆ ದಿನವನ್ನು ಮಾರನೆಯ ಕೆಲಸದ ದಿನ ಎಂದು ತಿಳಿಯತಕ್ಕದ್ದು.
5. ಇನ್ನೂ ಹೆಚ್ಚಿನ ವಿವರಗಳಿಗೆ ಈ ಕೆಳ ಸಹಿದಾರರ ಕಛೇರಿಯ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.

ಪಿ.ಆರ್. 23

ಕಾರ್ಯನಿರ್ವಾಹಕ ನಿರ್ದೇಶಕರು, ಹುಲಿ-ಸಿಂಹಧಾಮ, ತ್ಯಾವರೆಕೊಪ್ಪ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವನ್ಯಜೀವಿ ವಿಭಾಗ, ಶಿವಮೊಗ್ಗ.

## ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ
## ಟೆಂಡರ್ ಪ್ರಕಟಣೆ (ದ್ವಿಲಕೋಟೆ ಪದ್ದತಿ)

**ಸಂಖ್ಯೆ: ಶಿನಪ್ರಾ/ಕಾ-ನಿಮಾ/ಟೆಂ-1/2004-05, ದಿನಾಂಕ: 6ನೇ ಜನವರಿ 2005**

ಆಯುಕ್ತರು, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ, ವಿನೋಬನಗರ, ಶಿವಮೊಗ್ಗ ಇವರು ಶಿವಮೊಗ್ಗ ತಾಲ್ಲೂಕು ನಿಧಿಗೆ-ಮಾಚೇನಹಳ್ಳಿಯಲ್ಲಿ ವಸತಿ ಬಡಾವಣೆ ನಿರ್ಮಾಣ ಮಾಡುವ ಸಲುವಾಗಿ ಅರ್ಹ ಲೋಕೋಪಯೋಗಿ ನೋಂದಾಯಿತ ಒಂದನೇ ದರ್ಜೆ ಗುತ್ತಿಗೆದಾರರು/ಸಂಸ್ಥೆಗಳಿಂದ **"ದ್ವಿಲಕೋಟೆ ಪದ್ಧತಿ"** ಯಲ್ಲಿ ಮೊಹರಾದ ಐಟಂ ರೇಟ್ ಟೆಂಡರ್‌ನ್ನು ದ್ವಿಪ್ರತಿಯಲ್ಲಿ ಆಹ್ವಾನಿಸಿದ್ದಾರೆ.

| | |
|---|---|
| 1) ಟೆಂಡರ್ ಪತ್ರಗಳಿಗೆ ಮನವಿ ಸ್ವೀಕರಿಸಲು ಕಡೆಯ | ದಿನಾಂಕ: 05.02.2005 ಸಂಜೆ 5.00 ಘಂಟೆಯವರೆಗೆ |
| 2) ಖಾಲಿ ಟೆಂಡರ್ ಪತ್ರಗಳ ನೀಡಿಕೆ | ದಿನಾಂಕ: 14.02.2005 ರಿಂದ 19.02.2005 ರವರೆಗೆ |
| 3) ಟೆಂಡರ್ ಪತ್ರಗಳನ್ನು ಸ್ವೀಕರಿಸಲು ಕಡೆಯ | ದಿನಾಂಕ: 26.02.2005 ಸಂಜೆ 4.00 ಘಂಟೆಯವರೆಗೆ |

ಆಸಕ್ತರು ನಿಗದಿತ ಟೆಂಡರ್ ಫಾರಂಗಳ ಬೆಲೆಯ ಮೊತ್ತದ ಡಿಮ್ಯಾಂಡ್ ಡ್ರಾಫ್ಟನ್ನು ಆಯುಕ್ತರು, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ ಇವರ ಹೆಸರಿಗೆ ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು. (ಈ ಮೊಬಲಗನ್ನು ಹಿಂದಿರುಗಿಸಲಾಗುವುದಿಲ್ಲ) ಹಾಗೂ ನೋಂದಣಿ ಚಾಲ್ತಿಯಲ್ಲಿರುವ ಬಗ್ಗೆ ಪತ್ರಾಂಕಿತ ಅಧಿಕಾರಿಯವರಿಂದ ಕ್ರಮವಾಗಿ ದೃಢೀಕರಿಸಲ್ಪಟ್ಟ ಕಂಟ್ರಾಕ್ಟರ್ ರಿಜಿಸ್ಟ್ರೇಷನ್ ಪ್ರಮಾಣ ಪತ್ರದ ಪ್ರತಿ ಲಗತ್ತಿಸಬೇಕು.

ಟೆಂಡರ್ ಪತ್ರವನ್ನು ಅಂಚೆ/ಕೊರಿಯರ್ ಮೂಲಕ ಪಡೆಯಲಪೇಕ್ಷಿಸಿದಲ್ಲಿ ನೋಂದಣಿ ಪುಸ್ತಕದೊಂದಿಗೆ ಆಯುಕ್ತರು, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ ಇವರಿಗೆ ಪಾವತಿಯಾಗುವಂತೆ, ಟೆಂಡರ್ ಫಾರಂ ಬೆಲೆಗೆ ಹೆಚ್ಚುವರಿಯಾಗಿ ರೂ.1,000/- ದ ಅಧಿಕ ಮೊಬಲಗಿನ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸಲ್ಲಿಸುವುದು. ಅಂಚೆ/ಕೊರಿಯರ್ ಮೂಲಕ ಕಳುಹಿಸಲ್ಪಡುವ ಟೆಂಡರ್ ಪತ್ರಗಳು ಮತ್ತು ನೋಂದಣಿ ಪುಸ್ತಕ ತಡವಾಗಿ ತಲುಪಿದಲ್ಲಿ/ತಲುಪದೇ ಹೋದಲ್ಲಿ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರವು ಜವಾಬ್ದಾರರಾಗಿರುವುದಿಲ್ಲ. ಮೇಲೆ ತಿಳಿಸಿರುವ ಯಾವುದೇ ದಿನಾಂಕವು ಘೋಷಿತ ರಜೆ ದಿನವಾದಲ್ಲಿ ಮುಂದಿನ ಕೆಲಸದ ದಿನವು ಸಿಂಧುವಾಗಿರುತ್ತದೆ.

ಮೊಹರಾದ ಟೆಂಡರುಗಳ ಲಕೋಟೆಯ ಮೇಲೆ ಕಾಮಗಾರಿಯ ಹೆಸರನ್ನು ದಪ್ಪ ಅಕ್ಷರಗಳಲ್ಲಿ ಸ್ಪುಟವಾಗಿ ಬರೆದಿರಬೇಕು. ಟೆಂಡರ್‌ಗೆ ಅರ್ಜಿ ಸಲ್ಲಿಸುವಾಗ ಗುತ್ತಿಗೆದಾರರು ತಮ್ಮ ಅಂಚೆ ವಿಳಾಸ, ದೂರವಾಣಿ ಸಂಖ್ಯೆ (ಇದ್ದಲ್ಲಿ) ತಪ್ಪದೇ ನಮೂದಿಸುವುದು.

ಟೆಂಡರುಗಳನ್ನು ಸಾಧ್ಯವಾದರೆ 26.02.2005 ದಿನದಂದು ಸಂಜೆ 4.30 ಗಂಟೆಗೆ ಅಥವಾ ಮುಂದಿನ ಕೆಲಸದ ಯಾವುದೇ ದಿನದಂದು ಆಯುಕ್ತರು, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ, ವಿನೋಬನಗರ, ಶಿವಮೊಗ್ಗ 577204 ಇಲ್ಲಿ ತೆರೆಯಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟಿರುವ ಅಂದಾಜು ವೆಚ್ಚ ರೂ. ಲಕ್ಷ ಗಳಲ್ಲಿ | ಇಎಂಡಿ ರೂ. ಲಕ್ಷಗಳಲ್ಲಿ | ಟೆಂಡರ್ ಫಾರಂ ಬೆಲೆ ರೂ. | ಕೆಲಸ ಮುಗಿಸಲು ಕಾಲ ಮಿತಿ | ಗುತ್ತಿಗೆ ದಾರರ ದರ್ಜೆ |
|---|---|---|---|---|---|---|
| 1. | ಶಿವಮೊಗ್ಗ ತಾಲ್ಲೂಕು ನಿಧಿಗೆ - ಮಾಚೇನಹಳ್ಳಿಯಲ್ಲಿ ಪ್ರಾಧಿಕಾರದ ಸ್ವಾಧೀನದಲ್ಲಿರುವ ಪ್ರದೇಶದಲ್ಲಿ ನಿವೇಶನಗಳ ವಿಂಗಡಣೆ, ರಸ್ತೆಗಳ ನಿರ್ಮಾಣ, ರಸ್ತೆ ಪಕ್ಕದ ಚರಂಡಿಗಳ ನಿರ್ಮಾಣ, ಅಡ್ಡ ಮೋರಿ ನಿರ್ಮಾಣ, ನೀರು ಸರಬರಾಜು ವ್ಯವಸ್ಥೆ ಮತ್ತು ಸಂಬಂಧಿಸಿದ ಇತರೆ ಕೆಲಸಗಳನ್ನು ನಿರ್ವಹಿಸುವುದು. | 235.60 | 2.36 | 15,000-00 | 6 ತಿಂಗಳು (ಮಳೆಗಾಲದ ಅವಧಿ ಜೂನ್‌ನಿಂದ ಸೆಪ್ಟೆಂಬರ್ ಹೊರತುಪಡಿಸಿ) | 1ನೇ ದರ್ಜೆ ಮತ್ತು ಮೇಲ್ಪಟ್ಟು |

**I. ಕೆಲಸದ ವ್ಯಾಪ್ತಿ:**

ವಸತಿ ನಿವೇಶನಗಳ ರಚನೆ, ರಸ್ತೆಗಳ ರಚನೆ, ಪಕ್ಕದ ಚರಂಡಿಗಳ ನಿರ್ಮಾಣ, ಸಿಡಿ ಕಾಮಗಾರಿಗಳು, ಲೀಡ್ ಆಫ್ ಚರಂಡಿಗಳು, ನೀರು ಸರಬರಾಜು ವ್ಯವಸ್ಥೆ ಅಭಿವೃದ್ಧಿ ಪಡಿಸುವುದು, ಬಡಾವಣೆ ನಾಮ ಫಲಕಗಳು, ನಿವೇಶನ ಗಡಿಕಲ್ಲುಗಳು ಮತ್ತು ನಂಬರಿಂಗ್ ಕಲ್ಲುಗಳು ಹಾಕುವುದು ಮುಂತಾದ ಸಂಬಂಧಿಸಿದ ಕಾಮಗಾರಿಗಳನ್ನು ಒಳಗೊಂಡಿರುತ್ತದೆ.

**II. ಅರ್ಹತಾ ಅಗತ್ಯತೆ:**

ಸುಪ್ರಸಿದ್ಧ ಮತ್ತು ಆರ್ಥಿಕವಾಗಿ ಬಲಾಢ್ಯವಾಗಿರುವ ಯಾವುದೇ ಪ್ರತ್ಯೇಕ ಸಂಸ್ಥೆ/ಏಜೆನ್ಸಿ ಪಾಲುದಾರಿಕೆ ಸಂಸ್ಥೆ ಕಂಪೆನಿ, ವ್ಯಕ್ತಿ (ಒಂದನೇ ದರ್ಜೆ ಗುತ್ತಿಗೆದಾರರಾಗಿ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಿರಬೇಕು) ಹಾಗೂ ಈ ಕೆಳಗೆ ತಿಳಿಸಿರುವ ಷರತ್ತುಗಳನ್ನು ತೃಪ್ತಿಪಡಿಸುವ ಸೂಕ್ತ ತಾಂತ್ರಿಕ, ಆರ್ಥಿಕ ಮತ್ತು ವ್ಯವಸ್ಥಾಪನಾ ಸಾಮರ್ಥ್ಯಗಳನ್ನು ಹೊಂದಿದ ಸಾರ್ವಜನಿಕ ಕ್ಷೇತ್ರದ ಉದ್ದಿಮೆಯವರು ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ.

1) ಜಂಟಿ ಕಾರ್ಯಾಚರಣೆಗೆ ಹಾಗೂ ಉಪ-ಗುತ್ತಿಗೆ ನೀಡಿಕೆಗೆ ಅವಕಾಶವಿರುವುದಿಲ್ಲ.

2) ಟೆಂಡರ್‌ಗೆ ಅರ್ಜಿ ಸಲ್ಲಿಸುವ ಗುತ್ತಿಗೆದಾರರು 01.04.2004 ರಿಂದ ಲೆಕ್ಕ ಹಾಕಲ್ಪಟ್ಟಂತೆ ಹಿಂದಿನ ಮೂರು ಆರ್ಥಿಕ ವರ್ಷಗಳಲ್ಲಿ ಕನಿಷ್ಠ ರೂ.500-00 ಲಕ್ಷ (ರೂ. ಐನೂರು ಲಕ್ಷ) ಮೌಲ್ಯದ ಕಾಮಗಾರಿಗಳನ್ನು ನಿರ್ವಹಿಸಿರಬೇಕು. ಅದರಲ್ಲಿ ವಸತಿ ಬಡಾವಣೆ ನಿರ್ಮಾಣದ ಕನಿಷ್ಠ ರೂ.200-00 ಲಕ್ಷಗಳ (ರೂ. ಎರಡು ನೂರು ಲಕ್ಷ) ಮೌಲ್ಯದ ಒಂದೇ ಕಾಮಗಾರಿಯನ್ನು ಪೂರ್ಣಗೊಳಿಸಿರಬೇಕು. ಹಾಗೂ ಇಂತಹ ಕಾಮಗಾರಿಯನ್ನು ತೃಪ್ತಿಕರವಾಗಿ ಪೂರ್ಣಗೊಳಿಸಲಾದ ಬಗ್ಗೆ ಕಾರ್ಯಪಾಲಕ ಇಂಜಿನಿಯರ್‌ರವರ ಶ್ರೇಣಿಗಿಂತ ಕಡಿಮೆಯಿರದ ಸಕ್ಷಮ ಅಧಿಕಾರಿಯಿಂದ ದೃಢೀಕರಿಸಲಾದ ಪ್ರಮಾಣ ಪತ್ರ ಸಲ್ಲಿಸಬೇಕು. ಸಕ್ಷಮ ಪ್ರಾಧಿಕಾರಿಯವರು ನೀಡಿದ ಅಗತ್ಯ ಪ್ರಮಾಣ ಪತ್ರ ಲಗತ್ತಿಸದೆ ಇರುವ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

3) i) ಟೆಂಡರು ಎರಡು ಲಕೋಟೆ ವ್ಯವಸ್ಥೆ (ಎ) ತಾಂತ್ರಿಕ ಬಿಡ್ ಮತ್ತು (ಬಿ) ಆರ್ಥಿಕ ಬಿಡ್ ಒಳಗೊಂಡಿರುತ್ತದೆ. ತಾಂತ್ರಿಕ ಬಿಡ್‌ನಲ್ಲಿ (i) ಇಎಂಡಿ (ii) ಗುತ್ತಿಗೆ ನಿರ್ವಹಣೆಯ ಅನುಭವ ಮತ್ತು ಹಿಂದಿನ ಕಾರ್ಯಕ್ಷಮತೆ ಸಂಬಂಧದಲ್ಲಿ ಮಾಹಿತಿಗಳನ್ನೊಳಗೊಂಡ ದಾಖಲೆಗಳು ಹಾಗೂ ಗುತ್ತಿಗೆದಾರರಲ್ಲಿ ಲಭ್ಯವಿರುವ ಯಂತ್ರೋಪಕರಣಗಳು (ರೋಡ್ ರೋಲರ್‌ಗಳು 2; ಮಿನಿಮಿಕ್ಸಿಂಗ್ ಪ್ಲಾಂಟ್-1; ಡೀಸಲ್ ಮಿಕ್ಸರ್‌ಗಳು-2; ಲಾರಿ/ಟಿಪ್ಪರ್‌ಗಳು-4; ಇವುಗಳ ಆರ್‌ಸಿ ಪುಸ್ತಕ ಮತ್ತು ಇನ್‌ವಾಯ್ಸ್‌ಗಳ ದೃಢೀಕೃತ ನಕಲನ್ನು ಒಳಗೊಂಡ ದಾಖಲೆಗಳು) ಸಿಬ್ಬಂದಿಗಳ ವಿವರ ಹಾಗೂ 01.04.2001ರ ನಂತರದ ಆರ್ಥಿಕ ವರ್ಷಗಳಿಗೆ ವಾರ್ಷಿಕ ಪರಿಶೋಧಿತ ಲೆಕ್ಕಪತ್ರಗಳ ರೂಪದಲ್ಲಿ ಆರ್ಥಿಕ ವರದಿಗಳನ್ನು (ಮಾರಾಟ ತೆರಿಗೆ ಮತ್ತು ಆದಾಯ ತೆರಿಗೆ ತೀರುವಳಿ ದೃಢೀಕರಣ) ಒಳಗೊಂಡಿರಬೇಕು. ಆರ್ಥಿಕ ಬಿಡ್‌ನಲ್ಲಿ ದರ ಬಿಡ್ ಮಾತ್ರ ಒಳಗೊಂಡಿರತಕ್ಕದ್ದು.

ii) ಬಿಡ್‌ಗಳನ್ನು ಪ್ರತ್ಯೇಕವಾದ ಎರಡು ಲಕೋಟೆಗಳಲ್ಲಿಟ್ಟು ಮೊಹರು ಮಾಡಿ "ತಾಂತ್ರಿಕ ಬಿಡ್" ಮತ್ತು "ಆರ್ಥಿಕ ಬಿಡ್" ಎಂದು ಲಕೋಟೆಗಳಿಗೆ ಮೇಲ್ಬರಹ ಮಾಡಿ ಈ ಎರಡೂ ಲಕೋಟೆಗಳನ್ನು ಮತ್ತೊಂದು ದೊಡ್ಡ ಲಕೋಟೆಯಲ್ಲಿಟ್ಟು ಮೊಹರು ಮಾಡಿ ಕೆಲಸದ ಹೆಸರನ್ನು ಲಕೋಟೆಯ ಮೇಲೆ ಮೇಲ್ಬರಹವಾಗಿ ಬರೆದು ಸಲ್ಲಿಸಬೇಕು.

iii) ಮೊದಲು ತಾಂತ್ರಿಕ ಬಿಡ್ ಲಕೋಟೆಯನ್ನು ತೆರೆದು ಅರ್ಹತಾ ಷರತ್ತುಗಳನ್ನು ಪೂರೈಸುವ ಟೆಂಡರುದಾರರ ಆರ್ಥಿಕ ಬಿಡ್ ಅನ್ನು ಮಾತ್ರ ತೆರೆಯಲಾಗುವುದು.

4. i) ಟೆಂಡರ್ ಫಾರಂಗಳನ್ನು ಗುತ್ತಿಗೆದಾರರ ನೋಂದಣಿ ಪುಸ್ತಕವನ್ನು ಹಾಜರ್ ಪಡಿಸಿದಲ್ಲಿ ಮಾತ್ರ ನೀಡಲಾಗುವುದು. ಹಾಗೂ ನೀಡಲಾಗುವ ಟೆಂಡರ್ ಫಾರಂ ಬಗ್ಗೆ ನೋಂದಣಿ ಪುಸ್ತಕದಲ್ಲಿ (ಕಂಟ್ರಾಕ್ಟರ್‌ಗಳ ಪಾಸ್ ಪುಸ್ತಕ) ನೋಂದಣಿಯನ್ನು ಕಡ್ಡಾಯವಾಗಿ ಮಾಡಿಸಿಕೊಳ್ಳತಕ್ಕದ್ದು. ಒಂದು ಪಕ್ಷ ಕಂಟ್ರಾಕ್ಟರುಗಳು ಟೆಂಡರು ಫಾರಂಗಳನ್ನು ಖುದ್ದಾಗಿ ಪಡೆಯಲು ಸಾಧ್ಯವಾಗದಿದ್ದಲ್ಲಿ ಅವರು ತಮ್ಮ ಪ್ರತಿನಿಧಿಯೊಬ್ಬರಿಗೆ ಅಧಿಕಾರ ಪತ್ರವನ್ನು ನೀಡಿ ಅವರ ಸಹಿಯನ್ನು ದೃಢೀಕರಿಸಿ ಪಾಸ್ ಪುಸ್ತಕವನ್ನು ಹಾಜರುಪಡಿಸಿ ಪಡೆಯಬಹುದು.

ii) ಟೆಂಡರ್ ಫಾರಂ ಪಡೆದು ಸಲ್ಲಿಸದ ಗುತ್ತಿಗೆದಾರರ ವಿರುದ್ಧ ಗುತ್ತಿಗೆದಾರರ ನೋಂದಣಿ ನಿಯಮಗಳಲ್ಲಿ ನಿಗದಿಪಡಿಸಿರುವ ಷರತ್ತುಗಳನ್ವಯ ಕ್ರಮ ಕೈಗೊಳ್ಳಲಾಗುವುದು.

iii) ಇಎಂಡಿ ಮೊಬಲಗನ್ನು ಆಯುಕ್ತರು, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ ಇವರ ಹೆಸರಿನಲ್ಲಿ ಪಡೆದ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಮಾತ್ರವೇ ಸಲ್ಲಿಸಬೇಕು.

iv) ಕಾಮಗಾರಿ ನಿರ್ವಹಣೆಯ ಪ್ರತಿ ಐಟಂಗಳ ಎದುರು ಟೆಂಡರ್ ಫಾರಂನ ದ್ವಿಪ್ರತಿಗಳಲ್ಲೂ ಆಂಗ್ಲ ಭಾಷೆಯಲ್ಲಿ ಮಾತ್ರ ಅಂಕಿ ಮತ್ತು ಅಕ್ಷರಗಳಲ್ಲಿ ಸ್ಪಷ್ಟವಾಗಿ ಎದ್ದು ಕಾಣುವಂತೆ ದರ ಮತ್ತು ಮೊಬಲಗನ್ನು ಬರೆಯಬೇಕು. ಮೂಲ ಟೆಂಡರ್ ಫಾರಂ ಅಥವಾ ನಕಲು ಟೆಂಡರ್ ಫಾರಂನಲ್ಲಿ ನಮೂದಿತ ದರಗಳಲ್ಲಿ ಯಾವುದೇ ವ್ಯತ್ಯಾಸ ಕಂಡುಬಂದಲ್ಲಿ ಈ ಪೈಕಿ ನಮೂದಿಸಿದ ಅತ್ಯಂತ ಕಡಿಮೆ ದರವನ್ನು ನಮೂದಿತ ದರವನ್ನಾಗಿ ಪರಿಗಣಿಸಲಾಗುವುದು. ದರ ನಮೂದಿಸುವಾಗ ಉಂಟಾಗುವ ತಿದ್ದುಪಡಿ, ಚಿತ್ತು ಬರಹಗಳು, ರದ್ದತಿಗಳು ಇತ್ಯಾದಿಗಳು ಇದ್ದ ಪಕ್ಷದಲ್ಲಿ ಅವುಗಳನ್ನು ಟೆಂಡರುದಾರರು ದೃಢೀಕರಿಸಬೇಕು. ಅಗತ್ಯ ದೃಢೀಕರಣಗಳು ಇಲ್ಲವಾದಲ್ಲಿ ಅಂತಹ ಟೆಂಡರನ್ನು ತಿರಸ್ಕರಿಸಲಾಗುವುದು.

v) ಯಶಸ್ವಿಯಾಗುವ ಟೆಂಡರುದಾರರು ಮಾಹಿತಿ ಸ್ವೀಕರಿಸಿದ ಹತ್ತು (10) ದಿನಗಳೊಳಗೆ ಒಪ್ಪಂದ ಕರಾರು ನಿರ್ವಹಿಸಿಕೊಂಡು ಕಾಮಗಾರಿಯನ್ನು ಪ್ರಾರಂಭಿಸತಕ್ಕದ್ದು. ಹಾಗೂ ಪಿಡಬ್ಲ್ಯೂಜಿ-65 ಕೆಪಿಡಬ್ಲ್ಯೂಡಿ ಸಂಪುಟ ಸಂಖ್ಯೆ II ಪ್ಯಾರ 167 (1) (ಕಾಲಕಾಲಕ್ಕೆ ತಿದ್ದುಪಡಿಯಾದಂತೆ) ರಲ್ಲಿ ಬದ್ಧರಿರುವ ಕುರಿತಂತೆ ಒಪ್ಪಂದವೊಂದನ್ನು ಬರೆದುಕೊಡಬೇಕು. ತಪ್ಪಿದಲ್ಲಿ ಟೆಂಡರನ್ನು ತಿರಸ್ಕರಿಸಲಾಗುವುದು.

vi) ಕಾರ್ಯಾದೇಶ ನೀಡಿದ ದಿನಾಂಕದಿಂದ ಹತ್ತು (10) ದಿನಗಳೊಳಗೆ ಕಾಮಗಾರಿಯನ್ನು ಸಂಪೂರ್ಣ ಶ್ರದ್ಧೆಯಿಂದ ಆರಂಭಿಸಬೇಕು. ತಪ್ಪಿದಲ್ಲಿ ಟೆಂಡರುದಾರರ ಕಾಮಗಾರಿಯ ಬಗ್ಗೆ ಆಸಕ್ತಿಯಿಟ್ಟುಕೊಂಡಿಲ್ಲವೆಂದು ಭಾವಿಸಲಾಗುವುದು ಮತ್ತು ಅಂತಹ ಟೆಂಡರುದಾರರ ಜವಾಬ್ದಾರಿ ಮತ್ತು ವೆಚ್ಚದಲ್ಲಿ ಪರ್ಯಾಯ ವ್ಯವಸ್ಥೆ/ಏಜೆನ್ಸಿ ಮೂಲಕ ಕಾಮಗಾರಿಯನ್ನು ನಿರ್ವಹಿಸಿಕೊಳ್ಳಲು ಕ್ರಮ ಕೈಗೊಳ್ಳಲಾಗುವುದು.

5. ಯಾವುದೇ ಕಾರಣ ನೀಡದೆ ಯಾವುದೇ ಅಥವಾ ಎಲ್ಲಾ ಟೆಂಡರುಗಳನ್ನು ಅಂಗೀಕರಿಸುವ/ತಿರಸ್ಕರಿಸುವ ಹಕ್ಕನ್ನು ಪ್ರಾಧಿಕಾರವು ಕಾಯ್ದಿರಿಸಿಕೊಂಡಿದೆ. ಹಾಗೂ ಗುತ್ತಿಗೆದಾರರು ನೀಡಲಾದ ಮಾಹಿತಿಗಳು ಸತ್ಯವಾಗಿರುವ ಬಗ್ಗೆ ಖಾತರಿಪಡಿಸಿಕೊಳ್ಳುವ ಅಧಿಕಾರವನ್ನು ಸಹ ಪ್ರಾಧಿಕಾರವು ಹೊಂದಿರುತ್ತದೆ.

6. ಕಾಮಗಾರಿ ಬಗ್ಗೆ ಹೆಚ್ಚಿನ ವಿವರಗಳನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ, ವಿನೋಬನಗರ, ಶಿವಮೊಗ್ಗ-577204 (ದೂರವಾಣಿ ಸಂಖ್ಯೆ 08182-265990) ಇವರಿಂದ ಕೆಲಸದ ದಿನಗಳಂದು ಮಧ್ಯಾಹ್ನ 3.30 ರಿಂದ ಸಂಜೆ 5.30 ಗಂಟೆಯವರೆಗೆ ಪಡೆಯಬಹುದಾಗಿದೆ.

**ಪಿ.ಜಿ. ರಮೇಶ್**

ಪಿ.ಡಿ. 8 ಆಯುಕ್ತರು, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ.

**KARNATAKA STATE ELECTRONICS DEVELOPMENT CORPORATION LTD.,**
**(A Government of Karnataka Enterprise)**
**N0.29/1, Race Course Road, Bangalore-560 001**
**No. KSEDC/COMML/TPT/03/2004-05, Dated: 6th January 2005**
**TENDER FOR SUPPLY & INSTALLATION OF SERVERS, COMPUTERS, PRINTERS AND ACCESSORIES**

Keonics intends to procure for SUPPLY & INSTALLATION OF SERVERS, COMPUTERS, PRINTERS AND ACCESSORIES from reputed and experienced firms in Two cover systems 1. Technical bid 2. Commercial bid. The details of the tender documents may be obtained on payment of Rs.500/- by Cash/D.D. from Purchase Department on all working days between 10.30 a.m. and 5.00 p.m. The Last date for submission of sealed quotations superscribing the enquiry ref. & date is 05.02.2005 at 3 p.m. The Quotations will be opened at 4.30 p.m. on 07.02.2005.

PD - 15 DIRECTOR OPERATIONS

**ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಲೋಕೋಪಯೋಗಿ ಇಲಾಖೆ, ಉಡುಪಿ ವಿಭಾಗ, ಉಡುಪಿ**
**ತಿದ್ದುಪಡಿ ಸಂಖ್ಯೆ: ಜಿ.ಎನ್.ಎಲ್./ಟಿ.ಎನ್.ಡಿ./ಯು.ಡಿ.ಎನ್./2004-05/ಜೆ೩, ದಿನಾಂಕ: 3ನೇ ಜನವರಿ 2005**

ಈ ಕಛೇರಿಯ ದಿನಾಂಕ: 27.12.2004ರ ಟೆಂಡರ್ ಪ್ರಕಟಣೆ ಸಂಖ್ಯೆ ನಂ. ಜಿ.ಎನ್.ಎಲ್./ಟಿ.ಎನ್.ಡಿ./ಯು.ಡಿ.ಎನ್./ 2004-2005/ಜೆ೩, ಹಾಗೂ ದಿನಾಂಕ: 31.12.2004ರ ಉದಯವಾಣಿ ಮತ್ತು ದಿನಾಂಕ: 31.12.2004ರ ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟಣೆಗೊಂಡ ಟೆಂಡರ್ ಪ್ರಕಟಣೆಯಲ್ಲಿ ಪ್ರಕಟಿಸಲಾದ ಕಾಮಗಾರಿಗಳ ಹೆಸರು ಮತ್ತು ಯಂತ್ರೋಪಕರಣಗಳ ವಿವರಗಳನ್ನು ಈ ಕೆಳಗಿನಂತೆ ತಿದ್ದಿ ಓದಿ ಕೊಳ್ಳುವುದು.

| ಕ್ರಮ ಸಂಖ್ಯೆ (ಪ್ರಕಟಣೆಯಂತೆ) | ಕಾಮಗಾರಿಯ ಹೆಸರು |
|---|---|
| 1 | ಉಡುಪಿ ತಾಲ್ಲೂಕು ಹಳುವಳ್ಳಿ - ಕನ್ನಾರು - ಸಾಸ್ತಾನ - ಅಮ್ಮನವರ ಕಟ್ಟೆ - ಬೆನೆಗಲ್ ರಸ್ತೆ ಅಭಿವೃದ್ಧಿ |
| 3 | ಉಡುಪಿ ತಾಲ್ಲೂಕು ಸಂತೆಕಟ್ಟೆ - ಮರಿಯಣ್ಣಮಕ್ಕಿ ರಸ್ತೆ ಅಭಿವೃದ್ಧಿ |

| ಕ್ರ.ಸಂ. | ಯಂತ್ರೋಪಕರಣ | ಸಂಖ್ಯೆಗಳು | ಮಾಲಿಕತ್ವದ ಪುರಾವೆ |
|---|---|---|---|
| 1 | ಎಂಜಿನ್ ಮೌಂಟೆಡ್ ಕಾಂಕ್ರೀಟ್ ಮಿಕ್ಸರ್ | 2 | ಪರ್ಚೇಸ್ ಇನ್‌ವ್ವಾಸ್/ಸೇಲ್‌ಡೀಡ್ ಬಾಡಿಗೆ ಪಡೆದ ವಿವರಗಳು (ಮಾಲಿಕನೊಂದಿಗೆ ಉಪಕರಣದ ಮಾಲಿಕತ್ವದ ಪುರಾವೆ ಸಹಿತ ಹಯರ್ ಅಗ್ರಿಮೆಂಟ್) |
| 2 | ಪಿನ್ ಎಂಡ್ ಸ್ಪೀಡ್ (speed) ವೈಬ್ರೇಟರ್ಸ್ | 2 | ............ ಅದೇ ........... |
| 3 | ಇಲೆಕ್ಟ್ರಿಕಲ್ ಜನರೇಟರ್ | 1 | ............ ಅದೇ ........... |
| 4 | ಸೆಂಟ್ರಿ ಫ್ಯೂಗಲ್ (ಕೇಂದ್ರ ಪಗಾಮಿ) | 2 | ............ ಅದೇ ........... |
| 5 | ಟಿಪ್ಪರ್‌ಗಳು | 2 | ............ ಅದೇ ........... |
| 6 | ರೋಡ್ ರೋಲರ್‌ಗಳು | 1 | ............ ಅದೇ ........... |
| 7 | ಸ್ಟೀಲ್ ಫಾರಂ ವರ್ಕ್ (steel form work) | 400 ಚ.ಮೀ. | ............ ಅದೇ ........... |
| 8 | ಸೆಂಟರಿಂಗ್ ಶೀಟ್ಸ್ (sheets) | 500 ಚ.ಮೀ. | ............ ಅದೇ ........... |
| 9 | ಟ್ರಾಕ್ಟರ್ ಮೌಂಟೆಡ್ ಕಂಪ್ರೆಸರ್ | 1 | ............ ಅದೇ ........... |

ಇನ್ನುಳಿದಂತೆ ಯಾವುದೇ ಬದಲಾವಣೆ ಇರುವುದಿಲ್ಲ ಹೆಚ್ಚಿನ ಮಾಹಿತಿಗಾಗಿ ಈ ಕಛೇರಿಯನ್ನು ಸಂಪರ್ಕಿಸಬಹುದು.

ಪಿ.ಆರ್. 25 ಕಾರ್ಯನಿರ್ವಾಹಕ ಇಂಜಿನಿಯರರು, ಲೋ.ಇ. ಉಡುಪಿ ವಿಭಾಗ, ಉಡುಪಿ.

**ಲೋಕೋಪಯೋಗಿ ಇಲಾಖೆ (ರಾಷ್ಟ್ರೀಯ ಹೆದ್ದಾರಿಗಳು)**
**ಕಾರ್ಯನಿರ್ವಾಹಕ ಇಂಜಿನೀಯರ್‌ರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ**
**ಅಲ್ಪಾವಧಿ ಟೆಂಡರ್ (ದ್ವಿ ಲಕೋಟೆ ಪದ್ಧತಿ)**
**ಅಧಿಸೂಚನೆ ಸಂಖ್ಯೆ: ಕಾನಿಇಂ:ರಾಹೆವಿ:ಕಾ:ಎಇ:ಎನ್‌ಐಟಿ:2004-05/1334, ದಿನಾಂಕ: 30ನೇ ಡಿಸೆಂಬರ್ 2004**

ಈ ಮುಂದೆ ತಿಳಿಸಿರುವ ಕಾಮಗಾರಿಗಳಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ-2000 ರಂತೆ ಮೊಹರು ಮಾಡಿದ ಬಾಬ್ತುವಾರು ಟೆಂಡರುಗಳನ್ನು ನಿಗದಿಪಡಿಸಿರುವ ಸ್ವರೂಪದ ದ್ವಿಪ್ರತಿಯಲ್ಲಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ 1ನೇ ದರ್ಜೆ ಗುತ್ತಿಗೆದಾರರಿಂದ ಆಹ್ವಾನಿಸಲಾಗಿದೆ. ಎರಡು ಲಕೋಟೆ ದರ ಸಲ್ಲಿಕೆಯ ವ್ಯವಸ್ಥೆಯಲ್ಲಿ 'ತಾಂತ್ರಿಕ ಬಿಡ್' ಮತ್ತು 'ಆರ್ಥಿಕ ಬಿಡ್' ಇರುತ್ತದೆ.

ದರಗಳನ್ನು ಎರಡು ಭಾಗಗಳಲ್ಲಿ ಎರಡು ಪ್ರತ್ಯೇಕ ಮೊಹರು ಮಾಡಿರುವ ಲಕೋಟೆಗಳಲ್ಲಿ 'ತಾಂತ್ರಿಕ ಬಿಡ್' ಮತ್ತು 'ಆರ್ಥಿಕ ಬಿಡ್' ಎಂದು ಗುರುತು ಮಾಡಿರುವುದನ್ನು ಸ್ವೀಕರಿಸಲಾಗುವುದು. ಈ ಎರಡೂ ಲಕೋಟೆಗಳನ್ನು ಮತ್ತೊಂದು ಲಕೋಟೆಯಲ್ಲಿಟ್ಟು ಮೊಹರು ಮಾಡಿ ಕಾಮಗಾರಿಯ ಹೆಸರು ಮೇಲ್ಬರಹವಾಗಿ ಬರೆದು ಈ ಕೆಳಗೆ ಸಹಿ ಮಾಡಿರುವವರ ವಿಳಾಸಕ್ಕೆ ಬರೆಯಬೇಕು ಮತ್ತು ಬಿಡ್ದುದಾರರ ಹೆಸರು ಮತ್ತು ಪೂರ್ಣ ಅಂಚೆ ವಿಳಾಸವನ್ನು ಬರೆದಿರಬೇಕು. ಪೂರ್ಣಗೊಳಿಸಿದ ಟೆಂಡರ್ ಸಲ್ಲಿಕೆಯನ್ನು ಅಧೀಕ್ಷಕ ಇಂಜಿನೀಯರ್, ರಾಷ್ಟ್ರೀಯ ಹೆದ್ದಾರಿ ವೃತ್ತ ಧಾರವಾಡ ಇವರ ಕಛೇರಿಯಲ್ಲಿ ಅಥವಾ ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ ಇವರ ಕಛೇರಿಯಲ್ಲಿ ಈ ಕೆಳಗೆ ಸಹಿ ಮಾಡಿರುವವರು ದಿನಾಂಕ: 28.01.2005ರ ಅಪರಾಹ್ನ 4.00 ಗಂಟೆ (ಐಎಸ್‌ಟಿ) ವರೆಗೆ ಸ್ವೀಕರಿಸುವರು. ಇದು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ-2000 ರಂತೆ ಮತ್ತು ಕರ್ನಾಟಕ ಲೋಕೋಪಯೋಗಿ ಇಲಾಖೆ ಕಾಯಿದೆ ಸಂಪುಟ 11ರ ಪಿಡಬ್ಲ್ಯೂಜಿ-65 ಮತ್ತು 66 ರಲ್ಲಿ ಗೊತ್ತುಪಡಿಸಿರುವ ನಿಯಮಗಳಿಗೆ ಒಳಪಟ್ಟಿರುತ್ತದೆ. ತಾಂತ್ರಿಕ ಬಿಡ್ಡನ್ನು ಈ ಕೆಳಗೆ ಸಹಿ ಮಾಡಿರುವವರು ಕೆಳಗೆ ನಮೂದಿಸಿದ ದಿನಾಂಕದಂದು ಕಾರ್ಯನಿರ್ವಾಹಕ ಇಂಜಿನೀಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ ಇವರ ಕಛೇರಿಯಲ್ಲಿ ತೆರೆಯುವರು. ತಾಂತ್ರಿಕ ಬಿಡ್‌ನಲ್ಲಿ ಅರ್ಹತೆ ಪಡೆದವರ ಆರ್ಥಿಕ ಬಿಡ್ಡನ್ನು ಮಾತ್ರ ತೆರೆಯಲಾಗುವುದು. ಮುಂದೆ ತಿಳಿಸಿರುವ ದಿನಾಂಕಗಳಲ್ಲಿ ಯಾವುದಾದರೂ ಸಾರ್ವತ್ರಿಕ ರಜಾ ದಿನವಾದರೆ ಮುಂದಿನ ಅನುಕೂಲಕರ ದಿನವನ್ನು ತಿಳಿಸಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗೆ ಇಡಲಾದ ಮೊತ್ತ ರೂ. ಲಕ್ಷಗಳಲ್ಲಿ | ಇ.ಎಂ.ಡಿ. ಮೊತ್ತ (ರೂ. ಗಳಲ್ಲಿ) | ಟೆಂಡರ್ ಫಾರಂ ಬೆಲೆ ತೆರಿಗೆಗಳು ಸೇರಿದಂತೆ ರೂ.ಗಳಲ್ಲಿ (ಹಿಂದಿರುಗಿಸ ಲಾಗುವುದಿಲ್ಲ) | ಕಾಮ ಗಾರಿಯ ಸ್ವರೂಪ | ಕಾಮಗಾರಿಗೆ ನಿಗದಿಪಡಿಸಲಾದ ಕಾಲಮಿತಿ (ಮಳೆಗಾಲ ಸಹಿತ) |
|---|---|---|---|---|---|---|
| 1 | 2 | 3 | 4 | 5 | 6 | 7 |
| ಏ) | **ಪ್ರೀ-ಕ್ವಾಲಿಫೀಕೇಶನ್ ಟೆಂಡರುಗಳು:** | | | | | |
| 1 | ರಾಹೆ-206ರ ತುಮಕೂರು-ಹೊನ್ನಾವರ ರಸ್ತೆಯ ಕಿ.ಮೀ. 317.00 ರಿಂದ 327.00 ರವರೆಗೆ ನಿಯತಕಾಲಿಕ ನವೀಕರಣ ಕಾಮಗಾರಿ. | 59.28 | 59,280/- | 10,000/- + 8% ಎಸ್.ಟಿ. + 10% ಎಸ್.ಸಿ. ಆನ್ ಎಸ್.ಟಿ. ಒಟ್ಟು ರೂ.10,880/- | ಎಸ್.ಡಿ. ಬಿ.ಸಿ. | 45 ದಿನಗಳು |
| 2 | ರಾಹೆ-17ರ ಪಣಜಿ-ಮಂಗಳೂರು ರಸ್ತೆಯ ಕಿ.ಮೀ. 125.00 ರಿಂದ 136.00 ರವರೆಗೆ ನಿಯತಕಾಲಿಕ ನವೀಕರಣ ಕಾಮಗಾರಿ. | 79.85 | 79,850/- | 10,000/- + 8% ಎಸ್.ಟಿ. + 10% ಎಸ್.ಸಿ. ಆನ್ ಎಸ್.ಟಿ. ಒಟ್ಟು ರೂ.10,880/- | ಎಸ್.ಡಿ. ಬಿ.ಸಿ. | 45 ದಿನಗಳು |
| ಏ) | **ನಾನ್ ಪ್ರೀ-ಕ್ವಾಲಿಫೀಕೇಶನ್ ಟೆಂಡರುಗಳು:** | | | | | |
| 1 | ರಾಹೆ-17ರ ಪಣಜಿ-ಮಂಗಳೂರು ರಸ್ತೆಯ ಕಿ.ಮೀ. 108.00 ರಿಂದ 115.00 ರವರೆಗೆ ನಿಯತಕಾಲಿಕ ನವೀಕರಣ ಕಾಮಗಾರಿ. | 49.51 | 49,510/- | 10,000/- + 8% ಎಸ್.ಟಿ. + 10% ಎಸ್.ಸಿ. ಆನ್ ಎಸ್.ಟಿ. ಒಟ್ಟು ರೂ.10,880/- | ಎಸ್.ಡಿ. ಬಿ.ಸಿ. | 45 ದಿನಗಳು |

**ಷರತ್ತುಗಳು:**

1. ಕಾಮಗಾರಿಗೆ ಸಲ್ಲಿಸಲು ಅಪೇಕ್ಷಿಸುವ ಗುತ್ತಿಗೆದಾರರು ಟೆಂಡರ್ ಪತ್ರದ ಬೆಲೆಯನ್ನು ನಗದಾಗಿ ಅಥವಾ ಕಾರ್ಯನಿರ್ವಾಹಕ ಇಂಜಿನೀಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ ಇವರ ಪರವಾಗಿ ಪಡೆದು ಕಾರವಾರದಲ್ಲಿ ಪಾವತಿಯಾಗುವ ನಗದಾಗಿ ಅಥವಾ ಡಿ.ಡಿ. ಸ್ವರೂಪದಲ್ಲಿ ಸಲ್ಲಿಸಿ ಅರ್ಜಿಯೊಂದಿಗೆ ಕೆಳಗೆ ಸಹಿ ಮಾಡಿದವರ ಕಛೇರಿಯಲ್ಲಿ ಸಲ್ಲಿಸಬೇಕು. ಅರ್ಜಿಯನ್ನು ಸಲ್ಲಿಸುವಾಗ ಅರ್ಜಿಯ ಜೊತೆಗೆ ನೋಂದಣಿ ಸಾಕ್ಷ್ಯಾಧಾರ ಇತ್ತೀಚಿನವರೆಗೆ ಆದಾಯ ತೆರಿಗೆಯಿಂದ ಮುಕ್ತವಾಗಿರುವ ಯೋಗ್ಯತಾ ಪತ್ರ ಮತ್ತು ಇದೇ ಸ್ವರೂಪದ ಕಾಮಗಾರಿ ನಿರ್ವಹಿಸಿರುವ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಇಲಾಖೆಯಿಂದ ಪಡೆದು ಅರ್ಜಿದಾರರು ಸಲ್ಲಿಸಬೇಕು. ಹಾಗೆ ಮಾಡದೇ ಇದ್ದಲ್ಲಿ ಅರ್ಜಿಯನ್ನು ಪರಿಗಣಿಸಲಾಗುವುದಿಲ್ಲ. ಅರ್ಹತಾ ಪತ್ರವನ್ನು ಕಾರ್ಯನಿರ್ವಾಹಕ ಇಂಜಿನೀಯರರ ಹುದ್ದೆಯ ತತ್ಸಮ ದರ್ಜೆಯ ಅಧಿಕಾರಯುಕ್ತ ಪ್ರಾಧಿಕಾರದಿಂದ ಪಡೆದಿರಬೇಕು.
2. ಟೆಂಡರ್‌ಗೆ ಅರ್ಜಿ ಸಲ್ಲಿಸಲು ಖಾಲಿ ಟೆಂಡರ್ ಫಾರಂಗಳನ್ನು ಪಡೆಯಲು ಹಾಗೂ ಮೊಹರಾದ ಟೆಂಡರ್‌ಗಳನ್ನು ಪಡೆಯುವ ದಿನಾಂಕಗಳು ಈ ಕೆಳಕಂಡಂತಿವೆ.

| | | |
|---|---|---|
| 1) | ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ | 17.01.2005 |
| 2) | ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ: | 20.01.2005 ಸಂಜೆ 5.30 ಗಂಟೆಯವರೆಗೆ |
| 3) | ಮೊಹರಾದ ಟೆಂಡರುಗಳನ್ನು ಸ್ವೀಕರಿಸುವ ದಿನಾಂಕ: | 28.01.2005 ಸಂಜೆ 4.00 ಗಂಟೆಯವರೆಗೆ |
| 4) | ತಾಂತ್ರಿಕ ಬಿಡ್ಡನ್ನು ತೆರೆಯುವ ದಿನಾಂಕ: | 29.01.2005 ಪೂರ್ವಾಹ್ನ 11.00 ಗಂಟೆಗೆ (ಸಾಧ್ಯವಾದಲ್ಲಿ) |

